ವದು. ಸಿದ್ಧಿ ಎಂದರೆ ಪ್ರಮಾಣದ ಫಲವಾದ ಅರಿವೆಂದೂ, ಆ ಅರಿವೆಂಬುದು ಒಂದೇ ಸಮನಾಗಿರುವದೆಂದೂ ಸ್ವಯಂಸಿದ್ಧವಾಗಿರುವದೆಂದೂ ಆತ್ಮಜ್ಯೋತಿಯ ಸ್ವರೂಪವೇ ಆಗಿರುವದೆಂದೂ (ಮೊದಲೇ) ಹೇಳಿರುತ್ತೇವೆ.

['ಸ್ಮೃತಿ, ಇಚ್ಛೆ-ಮುಂತಾದವುಗಳು'- ಅರಿಯಬೇಕೆಂಬ ಇಚ್ಛೆ, ಅರಿತುಕೊಳ್ಳುವದಕ್ಕೆ ಪ್ರಯತ್ನ, ಪ್ರಮಾಣವ್ಯಾಪಾರ, ಹಿಂದೆ ತಾನು ನೋಡಿರುವ ವಸ್ತುವಿನ ನೆನಪು. 'ಧಾತುವಿನ ಅರ್ಥವು'-ಕ್ರಿಯೆಯು. 'ಕಾರ್ಯಕರಣಗಳು'-ದೇಹೇಂದ್ರಿಯಗಳು. 'ಹಾಗಲ್ಲ....ಏಕೆಂದರೆ' ಎಂಬಲ್ಲಿಂದ 'ಸರಿಯಾಗುವದಿಲ್ಲ'- ಎಂಬವರೆಗಿನ ಗ್ರಂಥಭಾಗವು ಮೂಲದಲ್ಲಿಲ್ಲ. 'ಸ್ವಾತಂತ್ರ್ಯೇ ಅನವಸ್ಥಾ ಅಪರಿಹಾರ್ಯಾ ಸ್ಯಾದಿತಿ' ಎಂಬವರೆಗೂ ಪೂರ್ವಪಕ್ಷವೇ ಹೊರತು ಸಿದ್ಧಾಂತವಲ್ಲ ; ಈ ಭಾಗವನ್ನು ಸಿದ್ಧಾಂತಕ್ಕೇ ಹೊಂದಿಸುವದಕ್ಕೆ ವ್ಯಾಖ್ಯಾನಕಾರರು ಪ್ರಯತ್ನಮಾಡಿರುತ್ತಾರಾದರೂ ವಿಚಾರಕರ ಮನಸ್ಸಿಗೆ ಅದು ಸಮರ್ಪಕವಾಗುವದಿಲ್ಲ. ಆಚಾರ್ಯರು ಈ ಪ್ರಕರಣದಲ್ಲಿ ಬರೆದಿರುವ ವಿಚಾರದ ಸರಣಿಯನ್ನೂ ಇದೇ ವಿಷಯದಲ್ಲಿ ಬೃ. ಭಾ. (೪-೩-೭),ಸೂ. ಭಾ. (೧-೧-೪, ೨-೩-೪೦), ಗೀ. ಭಾ. (೧೮-೪೯)- ಈ ಭಾಷ್ಯಗಳಲ್ಲಿ ಹೇಳಿರುವದನ್ನೂ ನೋಡಿ ಗುರುವಿನ ಉತ್ತರವು ಹೇಗಿರಬೇಕೆಂಬುದನ್ನು ಊಹಿಸಿ ಚೌಕಕಂಸದಲ್ಲಿ ಬರೆದಿರುತ್ತದೆ.]

ಇಲ್ಲಿ ಶಿಷ್ಯನು ಮಾಡಿರುವ ಆಕ್ಷೇಪಗಳು ಎರಡು. ಇವೆರಡನ್ನೂ 'ಪ್ರಮಾತೃ' ಎಂಬ ಮಾತಿನ ಅರ್ಥಸ್ವಾರಸ್ಯವನ್ನು ಅವಲಂಬಿಸಿ ತೆಗೆದಿರುತ್ತದೆ. ಪ್ರಮಾತೃ ಎಂದರೆ ಅರಿಯುವಾತನು ಎಂದರ್ಥವಷ್ಟೆ? ಅರಿಯುವಾತನೇ ಅರಿವಾಗಲಾರನು, ಅರಿಯುವಾತನಲ್ಲಿ ಅರಿವು ಉಂಟಾಗುವದು. ಹಾಗಿಲ್ಲದೆ ಯಾವಾಗಲೂ ಇರುವ ಅರಿವನ್ನೇ 'ಅರಿವಾತನು' ಎಂದು ಕರೆಯುವದಾದರೆ ಭಾಷೆಯ ಸ್ವಾರಸ್ಯವೇ ಕೆಡುವದು. ಮೊದಲು ಅರಿಯದೆ ಇದ್ದು, ಆಮೇಲೆ ಅರಿಯಬೇಕೆಂಬ ಇಚ್ಛೆಯಿಂದ ಅರಿವಿನ ಸಾಧನಗಳನ್ನು ಉಪಯೋಗಿಸಿ ಅರಿವನ್ನು ಸಂಪಾದಿಸಿಕೊಳ್ಳುವವನನ್ನು 'ಪ್ರಮಾತೃ' ಎನ್ನುವದು ಯುಕ್ತವಾಗಿರುವದು ; ಅರಿವಿನ ಸ್ವಭಾವವೇ ಆಗಿ, ಇದ್ದಂತೆಯೇ ಇರುವ, ವಸ್ತುವನ್ನು ಪ್ರಮಾತೃವೆಂದು ಕರೆಯುವದು ಹೇಗೆ ಸರಿ? ಎಂಬುದು ಮೊದಲನೆಯ ಆಕ್ಷೇಪವು.

ಈ ಆಕ್ಷೇಪವು ಸರಿಯಲ್ಲ. ಏಕೆಂದರೆ ಹೊಸದಾಗಿ ಹುಟ್ಟುವ ಕ್ರಿಯೆಯನ್ನು ಹೇಳುವದಕ್ಕೇ ಧಾತುವನ್ನು ಉಪಯೋಗಿಸಬೇಕೇ ಹೊರತು, ನಿತ್ಯವಾಗಿರುವದನ್ನು ಹೇಳುವದಕ್ಕೆ ಉಪಯೋಗಿಸಲಾಗದು ಎಂಬ ನಿಯಮವನ್ನು ಶಿಷ್ಯನು ಇಟ್ಟುಕೊಂಡಿರುತ್ತಾನೆ. ಆದರೆ ಇಂಥ ನಿರ್ಬಂಧವೇನೂ ಇಲ್ಲ. 'ಕಲ್ಲು ಉಜ್ಜಿದರೆ ಹೊಳೆಯುತ್ತದೆ' ಎಂಬಲ್ಲಿ ಹೊಳಪೆಂಬುದು ಹೊಸದಾಗಿ ಉಂಟಾಗುವ ಮಾರ್ಪಾಡಿಗೆ ಹೆಸರಾಗಿರುತ್ತದೆ. ಆದರೆ 'ಸೂರ್ಯನು ಹೊಳೆಯುತ್ತಾನೆ' ಎಂದು ಹೇಳುತ್ತಾರಷ್ಟೆ; ಇಲ್ಲಿ ಹೊಳೆಯುವದೆಂಬುದು ಹೊಸದಾಗಿ ಉಂಟಾಗುವ ಕ್ರಿಯೆಯೇನೂ ಅಲ್ಲ, ಸೂರ್ಯನಲ್ಲಿ ಹೊಳಪು ಸ್ವಾಭಾವಿಕವಾಗಿಯೇ ಇರುತ್ತದೆ. ಇದರಂತೆಯೇ 'ಮನುಷ್ಯರು ನಿಂತಿದಾರೆ' ಎಂಬಲ್ಲಿ 'ನಿಲ್ಲು' ಎಂಬ ಧಾತುವು ಮೊದಲು ಓಡಾಡುತ್ತಿದ್ದು ಈಗ ನಿಂತಿರುವದೆಂಬ ಕ್ರಿಯೆಯನ್ನು ಹೇಳುವದು; ಆದರೆ 'ಬೆಟ್ಟಗಳು ನಿಂತಿವೆ' ಎಂಬಲ್ಲಿ ನಿಂತಿರುವ ಸ್ವಭಾವವನ್ನೇ ಹೇಳುವದು. ಇದರಂತೆಯೆ 'ಅರಿಯುತ್ತಾನೆ' ಎಂಬ ಮಾತನ್ನು ಹೊಸದಾಗಿ ಉಂಟಾಗುವ ಅರಿವಿಗೂ ಉಪಯೋಗಿಸಬಹುದು, ಯಾವಾಗಲೂ ಇರುವ ಸ್ವಭಾವಕ್ಕೂ ಉಪಯೋಗಿಸಬಹುದು. ಭಾಷೆಯಲ್ಲಿ ಎರಡಕ್ಕೂ ಅವಕಾಶವುಂಟು. ಅರಿಯದೆ ಹೊಸದಾಗಿ ಅರಿಯುವದೆಂಬ ಮೊದಲನೆಯ ಅರ್ಥವನ್ನು ಇಟ್ಟುಕೊಂಡರೆ, 'ಆತ್ಮನು ಪ್ರಮಾತೃ' ಎಂಬುದಕ್ಕೆ ಮನಸ್ಸು, ದೇಹ, ಇಂದ್ರಿಯ– ಮುಂತಾದವುಗಳ ಸಹಾಯದಿಂದ ಉಂಟಾಗುವ ವಿಶೇಷ ಜ್ಞಾನವನ್ನು ಆತ್ಮನು ಸಂಪಾದಿಸುತ್ತಾನೆಂಬ ಅರ್ಥವನ್ನು ಮಾಡಿಕೊಳ್ಳಬಹುದು. ಪ್ರತ್ಯಯಗಳು ಹೊಸದಾಗಿ ಹುಟ್ಟುವದರಿಂದಲೂ ಅವುಗಳ ಕೊನೆಯಲ್ಲಿ ಚೈತನ್ಯವು ಅಭಿವ್ಯಕ್ತವಾಗುವದರಿಂದಲೂ ಆಯಾ ಪ್ರತ್ಯಯಗಳೆಂಬ ಉಪಾಧಿಯಿಂದ 'ಅರಿವು ಉಂಟಾಯಿತು' ಎಂಬ ವ್ಯವಹಾರವು ಆಗುವದೆಂದು ಹಿಂದೆ ೧೪ನೆಯ ಖಂಡದಲ್ಲಿ ವಿವರಿಸಿರುತ್ತದೆ. ಇನ್ನು ಎರಡನೆಯ ಅರ್ಥವನ್ನು ಇಟ್ಟುಕೊಂಡರೆ 'ಆತ್ಮನು ಅರಿವಿನ ಸ್ವಭಾವವಾಗಿಯೇ ಇರುವನು'– ಎಂಬುದೇ ಆತ್ಮನು ಪ್ರಮಾತೃ

ವೆಂಬುದರ ತಾತ್ಪರ್ಯವಾಗುವದು. ಹೀಗೆ ಆತ್ಮನು ಪ್ರಮಾತೃವೆನ್ನು ವದಕ್ಕೆ ಯಾವ ಬಾಧಕವೂ ಇರುವದಿಲ್ಲ.

ಆತ್ಮಚೈತನ್ಯವು '**ಕೂಟಸ್ಥನಿತ್ಯ**'ವೆಂದು ಹೇಳಿರುವ ವಿಷಯದಲ್ಲಿ ಒಂದು ತಪ್ಪುತಿಳಿವಳಿಕೆಯುಂಟಾಗುವ ಸಂಭವವುಂಟು, ಆದ್ದರಿಂದ ಕೂಟಸ್ಥನಿತ್ಯವೆಂದರೇನೆಂಬುದನ್ನು ಸ್ವಲ್ಪ ಇಲ್ಲಿ ವಿವರಿಸುತ್ತೇವೆ. ಯಾವ ವಸ್ತು ಬೇರೆ ಬೇರೆ ಮಾರ್ಪಾಡುಗಳನ್ನು ಹೊಂದುತ್ತಾ ಇದ್ದರೂ ಅದೇ ಇದು ಎಂಬ ಬುದ್ಧಿಗೆ ವಿಷಯುವಾಗಿರುವದೇ ಅದು **ಪರಿಣಾಮಿ ನಿತ್ಯ**ವೆನಿಸುವದು. ಉದಾಹರಣೆಗೆ ಭೂಮಿಯು ಬೇರೆ ಬೇರೆ ರೂಪ ಗಳನ್ನು ಹೊಂದುತ್ತಿದ್ದರೂ 'ಇದು ಭೂಮಿಯು' ಎಂಬ ಬುದ್ಧಿಗೇ ವಿಷಯವಾಗಿರುವದು. ಒಂದು ಗಿಡವು ದಿನದಿನಕ್ಕೂ ಬೆಳೆಯು ತ್ತಿದ್ದರೂ ಅದೇ ಗಿಡವೆಂಬ ಬುದ್ಧಿಗೆ ವಿಷಯವಾಗಿರುವದು; ಆದ್ದರಿಂದ ಗಿಡವನ್ನೂ ಪರಿಣಾಮಿನಿತ್ಯವೆಂದು ಕರೆಯಬಹುದು. ಆದರೆ ಯಾವದು ಕಾಲದಿಂದ ಯಾವ ಮಾರ್ಪಾಡನ್ನೂ ಹೊಂದದೆ ಯಾವಾಗಲೂ ಇದ್ದಂತೆ ಇರುವದೋ ಅದು **ಕೂಟಸ್ಥನಿತ್ಯ**ವೆನಿಸುವದು. ಆತ್ಮಚೈತನ್ಯವು ಕೂಟಸ್ಥನಿತ್ಯವು, ಎಂದರೆ ಅದಕ್ಕೆ ಹುಟ್ಟುವದು, ಬೆಳೆಯುವದು- ಮುಂತಾದ ವಿಕಾರಗಳೂ ಇಲ್ಲ, ನಾಶವೂ ಇಲ್ಲ. ಕೂಟಸ್ಥ ವೆಂದರೆ ಚಲಿಸದೆ, ಬೆಟ್ಟದಂತೆ ಬಿದ್ದಲ್ಲಿ ಬಿದ್ದಿರುವ ವಸ್ತುವೆಂದು ಭಾವಿಸ ಬಾರದು. ಚಲಿಸುವದೂ ನಿಂತಿರುವದೂ ಜ್ಞೇಯವಾಗಿರುವ ಜಡ ವಸ್ತುಗಳ ಧರ್ಮಗಳು; ಆತ್ಮನು ಜ್ಞೇಯನಲ್ಲವಾದ್ದರಿಂದ ಅವನು ಚಲನೂ ಅಲ್ಲ, ಸ್ಥಿರನೂ ಅಲ್ಲ.

ಚಲವಾಗಿರುವ ಪ್ರತ್ಯಯಗಳ ಕೊನೆಯಲ್ಲಿ ತೋರಿಕೊಳ್ಳುವ ಅರಿವು ನಿಜವಾಗಿ ಹೊಸದಾಗಿ ಹುಟ್ಟುವದಿಲ್ಲವೆಂತಲೂ ಅದು ಸ್ವಭಾವ ದಿಂದ ಹಾಗೆಯೇ ಇದ್ದುಕೊಂಡಿರುವದೆಂತಲೂ ಮೇಲೆ ಹೇಳಿದೆಯಷ್ಟೆ? ಹೊಸದಾಗಿ ಉಂಟಾದರೇ ಅರಿವೆನ್ನಬೇಕು, ಯಾವಾಗಲೂ ಹಾಗೆಯೇ ಇದ್ದುಕೊಂಡಿದ್ದರೆ ಅರಿವೆನ್ನಲಾಗದು- ಎನ್ನುವವರು ಈ ಎರಡು ಸಂದರ್ಭಗಳಲ್ಲಿಯೂ ತೋರಿಕೊಳ್ಳುವ ಅರಿವಿನ ಸ್ವರೂಪದಲ್ಲಿ ಯಾವ

ಬಗೆಯ ವಿಶೇಷವಿರುವದೆಂಬುದನ್ನು ತೋರಿಸಿಕೊಡಬೇಕು. ಎರಡು ಸಂದರ್ಭಗಳಲ್ಲಿಯೂ ಸ್ವರೂಪವು ಒಂದೇ ಆಗಿರುವದಾದರೆ, ಹೊಸ ದಾಗಿ ಉಂಟಾದದ್ದೇ ಅರಿವೆಂದು ಕರೆಯಬೇಕು- ಎಂಬ ನಿರ್ಬಂಧ ವನ್ನೇರ್ಪಡಿಸುವದಕ್ಕೆ ಕಾರಣವೇನು ? ದೀಪವನ್ನು ಹೊತ್ತಿಸಿದರೆ ಉಂಟಾಗುವ ಬೆಳಕು ಕತ್ತಲೆಯನ್ನು ಪರಿಹರಿಸುವದು, ಸೂರ್ಯನ ಬೆಳಕೂ ಕತ್ತಲೆಯನ್ನು ಪರಿಹರಿಸುವದು, ಕತ್ತಲೆಯನ್ನು ಪರಿಹರಿಸು ವದೆಂಬ ಸ್ವಭಾವವು ಒಂದೇ ಆಗಿದ್ದರೂ ಹೊಸದಾಗಿ ಹೊತ್ತಿಸಿದ ದೀಪವೇ ಮುಂತಾದವುಗಳ ಬೆಳಕನ್ನೇ ಬೆಳಕೆಂದು ಕರೆಯಬೇಕು, ಸೂರ್ಯನೇ ಮುಂತಾದವುಗಳಲ್ಲಿ ಸ್ವಭಾವದಿಂದಿರುವದನ್ನು ಬೆಳಕೆಂದು ಕರೆಯಕೂಡದು- ಎಂದು ನಿಯಮವನ್ನು ಏರ್ಪಡಿಸುವದಕ್ಕೆ ಆದೀತೆ ? ಆಗಲಾರದು. ಇದರಂತೆ ಆತ್ಮನ ಸ್ವಭಾವವಾಗಿಯೇ ಇರುವ ಅರಿವನ್ನು ಅರಿವೆನ್ನಕೂಡದೆಂಬುದಕ್ಕೆ ಯಾವ ಕಾರಣವೂ ಇಲ್ಲ. ಆದ್ದರಿಂದ ಅದನ್ನು ಪ್ರಮೆಯೆನ್ನುವದಕ್ಕಾಗಲಿ ಆತ್ಮನನ್ನು ಪ್ರಮಾತೃ ಎಂದು ಕರೆಯುವದಕ್ಕಾಗಲಿ ಯಾವ ಅಡ್ಡಿಯೂ ಇರುವದಿಲ್ಲ.

ಈಗ ಎರಡನೆಯ ಆಕ್ಷೇಪವನ್ನು ವಿಚಾರಕ್ಕೆ ತೆಗೆದುಕೊಳ್ಳೋಣ. ಆತ್ಮನು ಕೂಟಸ್ಥನಿತ್ಯವಾಗಿರುವ ಚೈತನ್ಯರೂಪನಾಗಿದ್ದರೆ ಅವನಲ್ಲಿ ಯಾವ ಮಾರ್ಪಾಡುಗಳಿಗೂ ಅವಕಾಶವಿರುವದಿಲ್ಲವೆಂದಾಯಿತು. ಹಾಗಾದರೆ ಅವನು ಪ್ರಮಾಣವಾಗಿರುವ ಇಂದ್ರಿಯಾದಿಗಳನ್ನು ಉಪ ಯೋಗಿಸಿ ಪ್ರಮೇಯವನ್ನು ಅರಿಯುವದು ಹೇಗೆ ? ಪ್ರಮಾಣವನ್ನು ಉಪಯೋಗಿಸುವದೆಂಬುದೂ ಒಂದು ಕ್ರಿಯೆ ; ಈ ಕ್ರಿಯೆಗೂ ಒಂದು ಕರಣವು ಬೇಕು. ಆ ಕರಣವನ್ನು ತೆಗೆದುಕೊಳ್ಳುವದಕ್ಕೆ ಮತ್ತೊಂದು ಕರಣವು ಬೇಕು, ಅದಕ್ಕೆ ಮತ್ತೊಂದು ಕರಣವು ಬೇಕು- ಎಂದು ನಿಲುಗಡೆಯಿಲ್ಲದೆ ಕರಣಗಳನ್ನು ಕಲ್ಪಿಸಬೇಕಾಗುವದಲ್ಲವೆ ? ಇದ ಕ್ಕೊಂದು ಉದಾಹರಣೆ: ಒಬ್ಬ ಮನುಷ್ಯನು ಬಾಚಿ, ಉಳಿ- ಮುಂತಾದ ಕರಣಗಳನ್ನುಪಯೋಗಿಸುವಾಗ ಬಡಗಿಯೆನ್ನಿಸಿಕೊಳ್ಳುವನು, ಸುಮ್ಮನೆ ಇರುವಾಗ ಎಲ್ಲರಂತೆ ಮನುಷ್ಯನಾಗಿರುವನು. ಮನುಷ್ಯನು ಬಡಗಿ

ಯಾಗುವದಕ್ಕೆ ಬಾಚಿ, ಉಳಿ- ಮುಂತಾದವುಗಳನ್ನು ಪಯೋಗಿಸುವದು ಅಗತ್ಯವಾಗಿರುವಂತೆ ಆತ್ಮನು ಕರ್ತೃವಾಗುವದಕ್ಕೆ ದೇಹ, ಇಂದ್ರಿಯ- ಮುಂತಾದವುಗಳನ್ನು ಪಯೋಗಿಸುವದು ಅಗತ್ಯವಾಗಿರುತ್ತದೆ. ಬಡಗಿಗೆ ಬಾಚಿ, ಉಳಿ- ಮುಂತಾದವುಗಳನ್ನು ಉಪಯೋಗಿಸುವದಕ್ಕೆ ಮೊದಲೇ ಕೈಕಾಲುಗಳು ಇರುವದರಿಂದ ಅವನು ಆ ಆಯುಧಗಳನ್ನು ತೆಗೆದು ಕೊಂಡು ಕೆಲಸಮಾಡಬಹುದಾಗಿದೆ ; ಆದರೆ ಆತ್ಮನು ಬರಿಯ ಚೈತನ್ಯದ ರೂಪವೇ ಆಗಿರುವದರಿಂದ ಅವನಲ್ಲಿ ಕೈಕಾಲುಗಳೇನೂ ಇರುವದಿಲ್ಲ. ಕೈಕಾಲುಗಳನ್ನು ಮೊದಲು ಧರಿಸಿಕೊಳ್ಳುವದಕ್ಕೂ ಬೇರೆ ಸಾಧನವು ಬೇಕಾಗುವದು ; ಆ ಸಾಧನವನ್ನು ತೆಗೆದುಕೊಳ್ಳುವದಕ್ಕೂ ಕರಣವು ಬೇಕಾಗುವದು. ಹೀಗೆ ಬೇರೆ ಬೇರೆ ಕರಣಗಳ ಸಾಲನ್ನು ಕಲ್ಪಿಸುವ ದೋಷವು ಸಿದ್ಧಾಂತಕ್ಕೆ ಒದಗುವದು. ಈ ಕಲ್ಪನೆಯು ಅನುಭವಕ್ಕೆ ವಿರುದ್ಧವಾದ್ದರಿಂದ ಆತ್ಮನನ್ನು ಕೂಟಸ್ಥನಿತ್ಯನೆಂದು ಭಾವಿಸುವದು ಸರಿಯಲ್ಲ. ಹೀಗೆಂಬುದು ಶಿಷ್ಯನ ಎರಡನೆಯ ಆಕ್ಷೇಪವು.

ಪ್ರಮಾತೃವಾದ ಆತ್ಮನಲ್ಲಿ ಕರ್ತೃತ್ವವೆಂಬ ಮಾರ್ಪಾಡು ನಿಜ ವಾಗಿರಬೇಕೆಂದೂ ಇಲ್ಲದಿದ್ದರೆ ಆತ್ಮನನ್ನು ಪ್ರಮಾತೃವೆಂದು ಹೇಳು ವದಕ್ಕೆ ಆಗಲಾರದೆಂದೂ ಶಿಷ್ಯನು ಭಾವಿಸಿರುತ್ತಾನೆ. ಇದು ತಪ್ಪು. ಏಕೆಂದರೆ ಆತ್ಮನಲ್ಲಿ ಕರ್ತೃತ್ವವು ಸ್ವಾಭಾವಿಕವಾಗಿ ಇರುವದಿಲ್ಲ; ಸುಷುಪ್ತಿಯಲ್ಲಿ ಯಾವ ಕಾರ್ಯಕರಣಗಳ ಸಂಬಂಧವೂ ಆತ್ಮನಿಗೆ ಇರುವದಿಲ್ಲವೆಂಬುದು ಅನುಭವಸಿದ್ಧವಾಗಿರುವದು. ಕರಣಗಳನ್ನೂ ದೇಹವನ್ನೂ ತೆಗೆದುಕೊಳ್ಳುವದೆಂಬುದು ನಿಜವಾಗಿ ಆತ್ಮನಲ್ಲಿ ಉಂಟಾ ಗುವ ಮಾರ್ಪಾಡಲ್ಲ. ಸ್ವಪ್ನದಲ್ಲಿ ನಿಜವಾಗಿ ಯಾವ ದೇಹವೂ ಇಂದ್ರಿ ಯವೂ ಇಲ್ಲದಿದ್ದರೂ ದೇಹೇಂದ್ರಿಯಗಳೊಡಗೂಡಿ ಆಯಾ ಕೆಲಸ ಗಳನ್ನು ಮಾಡುವಂತೆಯೂ ಆಯಾ ಫಲಗಳನ್ನು ಅನುಭವಿಸುವಂತೆಯೂ ತೋರುವದು ಎಲ್ಲರ ಅನುಭವದಲ್ಲಿಯೂ ಇದೆಯಲ್ಲವೆ? ಇದರಂತೆ ಎಚ್ಚರದಲ್ಲಿಯೂ ತಾನು ಇದ್ದಂತೆಯೇ ಇರುವ ಆತ್ಮನಲ್ಲಿ ದೇಹೇಂದ್ರಿ ಯಗಳು ತೋರಿಕೊಳ್ಳಬಹುದಾಗಿದೆ. ಅಜ್ಞಾನದಿಂದ ತೋರಿಕೊಳ್ಳುವ

ಈ ದೇಹೇಂದ್ರಿಯಗಳೆಂಬ ಉಪಾಧಿಯಿಂದ ಈ ಅವಸ್ಥೆಯಲ್ಲಿ ಆತ್ಮನಿಗೆ ಕರ್ತೃತ್ವವೂ ಭೋಕ್ತೃತ್ವವೂ ಉಂಟಾಗಿರುವವು ; ಪರಮಾರ್ಥವಾಗಿ ಆತ್ಮನಲ್ಲಿ ಕರ್ತೃತ್ವವಾಗಲಿ ಭೋಕ್ತೃತ್ವವಾಗಲಿ ಇರುವದೇ ಇಲ್ಲ. ಇದೇ ವೇದಾಂತಸಿದ್ಧಾಂತವು. ಈ ಪಕ್ಷದಲ್ಲಿ ಯಾವ ದೋಷವೂ ಇರುವದಿಲ್ಲ.

ಹಾಗಲ್ಲದೆ ಆತ್ಮನು ನಿಜವಾಗಿಯೂ ದೇಹೇಂದ್ರಿಯಗಳನ್ನು ಸಂಪಾದಿಸಿರುವನೆಂದೇ ಹೇಳುವದಾದರೆ ಎಲ್ಲಾ ದೋಷವೂ ಬರುವದು. ಹೇಗೆಂದರೆ, ಹಿಂದೆ ಮಾಡಿದ ಕರ್ಮಗಳಿಂದ ಈ ಜನ್ಮದ ದೇಹವು ಬಂದಿರುವದೆಂದು ಕಲ್ಪಿಸುವದಕ್ಕೂ ಬರುವದಿಲ್ಲ ; ಆತ್ಮನಿಗೆ ಶರೀರದ ಸಂಬಂಧವಿದ್ದ ಹೊರತು ಯಾವ ಕರ್ಮವೂ ಆಗುವ ಹಾಗಿಲ್ಲ. ಆ ಕರ್ಮಕ್ಕೆ ಬೇರೊಂದು ದೇಹ, ಆ ದೇಹಕ್ಕೆ ಮತ್ತೊಂದು ಕರ್ಮ- ಹೀಗೆ ನಿಲುಗಡೆಯಿಲ್ಲದೆ ಕಲ್ಪಿಸುತ್ತಾ ಹೋಗಬೇಕಾಗುವದು. ಹೀಗೆ ಎಷ್ಟು ಹಿಂದಕ್ಕೆ ಹೋದರೂ ಆತ್ಮನಿಗೆ ದೇಹವಾಗಲಿ ಕರ್ಮವಾಗಲಿ ತನಗೆ ತಾನೇ ಸಿದ್ಧವಾಗುವದಿಲ್ಲವಾದ್ದರಿಂದ, ಈ ಜನ್ಮಾಂತರಗಳ ಸಾಲಿನ ಕಲ್ಪನೆಯಿಂದ ಯಾವ ಸಹಾಯವೂ ಆಗುವ ಹಾಗಿಲ್ಲ. ಕರ್ಮವು ತಾನೇ ಬಂದು ಆತ್ಮನಲ್ಲಿ ಸೇರಿಕೊಳ್ಳುವದೆಂದು ಕಲ್ಪಿಸುವದಕ್ಕೂ ಆಗುವದಿಲ್ಲ ; ಏಕೆಂದರೆ ಕರ್ಮವು ಉಂಟಾಗುವದೆಂಬುದು ಹೇಗೆಂಬುದೇ ಪ್ರಕೃತ ವಿಚಾರದ ವಿಷಯವಾಗಿರುತ್ತದೆ. ಆತ್ಮನನ್ನು ಮತ್ತೊಬ್ಬರು ಯಾರಾದರೂ ಮಾಡಿಸುತ್ತಾರೆಂದೂ ಹೇಳುವದಕ್ಕೆ ಬರುವದಿಲ್ಲ. ಆ ಪಕ್ಷದಲ್ಲಿ ಆತ್ಮನು ಪರತಂತ್ರನಾಗಿ, ಜಡನಾಗಿ, ನಾಶವಾಗುವ ಸ್ವರೂಪದವನಾಗಬೇಕಾಗುವದೆಂದು ಹಿಂದೆ ೧೧ನೆಯ ಪ್ರಕರಣದಲ್ಲಿ ತಿಳಿಸಿರುತ್ತದೆ. ಆತ್ಮರು ಇಬ್ಬರೆನ್ನುವದೂ ಯುಕ್ತಿಗೆ ಹೊಂದುವದಿಲ್ಲ ; ಏಕೆಂದರೆ ಇಬ್ಬರೂ ತಮತಮಗಾಗಿ ಇರತಕ್ಕವರಾಗಿರಬೇಕಾಗುವದರಿಂದ ಒಬ್ಬರಿಂದ ಒಬ್ಬರಿಗೆ ಯಾವ ಉಪಕಾರವೂ ಆಗುವ ಹಾಗಿರುವದಿಲ್ಲ. ಪರಮಾತ್ಮನಿಗಿಂತ ಬೇರೆಯಾದ ಆತ್ಮನೇ ಇಲ್ಲವೆಂದು ಶ್ರುತಿಯಲ್ಲಿಯೂ ಹೇಳಿರುತ್ತದೆ. ಈ ಆತ್ಮನಿಗಿಂತ ಬೇರೆಯಾದದ್ದೆಲ್ಲವೂ ಅನಾತ್ಮವಾಗು

ವದರಿಂದ ಅಂಥ ಅನಾತ್ಮದಿಂದ ಪ್ರೇರಿತನಾಗಿ ಆತ್ಮನು ಕೆಲಸವನ್ನು ಮಾಡುವನೆಂಬುದೂ ಸರಿಯಾಗುವದಿಲ್ಲ. ಇದಲ್ಲದೆ ದೇಹಾದಿಗಳು ಆತ್ಮಚೈತನ್ಯಕ್ಕೆ ವಿಷಯವಾಗಿಯೇ ಸಿದ್ಧವಾಗುವವುಗಳಾಗಿವೆಯೇ ಹೊರತು, ತಾವೇ ಸಿದ್ಧವಾಗುವ ಹಾಗಿಲ್ಲ.

ದೇಹೇಂದ್ರಿಯಗಳನ್ನು ಪ್ರಮಾಣದಿಂದ ಸಿದ್ಧಮಾಡಬೇಕಾದದ್ದೇನೂ ಇಲ್ಲವೆಂದೂ ಅವುಗಳು ಸ್ವಭಾವವಾಗಿಯೇ ನಮಗೆ ಇದ್ದುಕೊಂಡಿರುವವೆಂದೂ ದೇಹೇಂದ್ರಿಯಗಳಿಂದ ಕೂಡಿರುವ ನಮಗೆ ಮಿಕ್ಕ ವಸ್ತುಗಳು ಮಾತ್ರ ಪ್ರಮಾಣಸಿದ್ಧವಾಗಬೇಕಾಗಿರುವವೆಂದೂ ಕೆಲವರು ಹೇಳಬಹುದು. ಆದರೆ ಇದು ಸರಿಯಲ್ಲ. ಮನುಷ್ಯನು ದೇಹೇಂದ್ರಿಯಗಳು ತನಗೆ ಯಾವಾಗಲೂ ಇರುವವೆಂದುಕೊಂಡು ಅವುಗಳನ್ನು ನಾನು, ನನ್ನದು-ಎಂಬ ಅಭಿಮಾನದಿಂದ ತನ್ನ ಕಡೆಗೆ ಸೇರಿಸಿಕೊಂಡಮೇಲೆಯೇ ಮಿಕ್ಕ ವಸ್ತುಗಳನ್ನು ಪ್ರಮೇಯವೆಂದೂ ತಾನು ಪ್ರಮಾತೃವೆಂದೂ ಅರಿತುಕೊಳ್ಳುವನೆಂಬುದೇನೋ ನಿಜ. ಆದರೆ ದೇಹೇಂದ್ರಿಯಗಳೇನೂ ಮನುಷ್ಯನಿಗೆ ಸ್ವಾಭಾವಿಕವಾಗಿರುವದಿಲ್ಲ. ಅವುಗಳನ್ನು ತಾನೆಂದು ಬಗೆಯುವುದೂ ತಪ್ಪುತಿಳಿವಳಿಕೆಯೇ ಹೊರತು ಸರಿಯಾದ ತಿಳಿವಳಿಕೆಯಲ್ಲ. ಹೇಗೆಂದರೆ ಸ್ವಪ್ನದಲ್ಲಿಯಾಗಲಿ ಸುಷುಪ್ತಿಯಲ್ಲಿಯಾಗಲಿ ಈ ದೇಹೇಂದ್ರಿಯಗಳು ಇರುವದಿಲ್ಲ. ತಾನು ಮಾತ್ರ ಇದ್ದೇ ಇರುತ್ತಾನೆ. ಆದ್ದರಿಂದ ದೇಹೇಂದ್ರಿಯಗಳು ತಾನೆಂಬುದು ಅಧ್ಯಾಸದಿಂದ ಆದ ತಿಳಿವಳಿಕೆಯೇ. ಇದೂ ಅಲ್ಲದೆ ಹೊರಗಿರುವ ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಇವುಗಳು ಹೇಗೆ ಭೌತಿಕವಾಗಿರುವವೋ ದೇಹೇಂದ್ರಿಯಗಳೂ ಅದರಂತೆಯೇ ಭೌತಿಕವಾಗಿರುತ್ತವೆ. ಭೌತಿಕವಸ್ತುಗಳೆಲ್ಲ ವಿಷಯವಾಗಿ ಪ್ರಮಾಣಸಿದ್ಧವಾಗಿರುವವೇ ಹೊರತು ಸ್ವತಃಸಿದ್ಧವಾಗಿರುವದಿಲ್ಲ. ಏಕೆಂದರೆ ಸಿದ್ಧಿ ಎಂದರೆ ಪ್ರಮಾಣದ ಫಲವಾದ ಅರಿವು; ಭೌತಿಕವಸ್ತುಗಳೆಲ್ಲ ಜಡವಾಗಿರುತ್ತವೆ, ಇವುಗಳಲ್ಲಿ ಅರಿವೆಂಬುದೇನೂ ಇರುವದಿಲ್ಲ. ಅರಿವು ವಿಷಯಿಯಾಗಿರುವದು, ಕೂಟಸ್ಥನಿತ್ಯವಾಗಿರು

ವದು, ಆತ್ಮಸ್ವರೂಪವಾಗಿರುವದು, ಸ್ವತಃಸಿದ್ಧವಾಗಿರುವದು. ಆದ್ದರಿಂದ ಈ ಅರಿವು ದೇಹಾದಿಗಳ ಧರ್ಮವಲ್ಲ.

ಹೀಗೆ ಆತ್ಮನು ಸ್ವತಃ ಕರ್ತೃವಲ್ಲ, ಎಂದರೆ ತಾನೇ ಕೆಲಸಮಾಡುವವನಲ್ಲ ; ಅವನನ್ನು ಕೆಲಸಮಾಡಿಸುವ ಮತ್ತೊಬ್ಬ ಆತ್ಮನಿಲ್ಲ, ಅನಾತ್ಮವಸ್ತು ಪರತಂತ್ರವಾಗಿ ಆತ್ಮಚೈತನ್ಯದಿಂದ ಸಿದ್ಧಿಯಾಗತಕ್ಕದ್ದಾದ್ದರಿಂದ ಅದೂ ಆತ್ಮನನ್ನು ಕೆಲಸಮಾಡಿಸಲಾರದು, ಕೆಲಸವು ತನಗೆ ತಾನೇ ಉಂಟಾಗಲೂ ಆರದು. ಈ ಕಾರಣಗಳಿಂದ ಆತ್ಮನಲ್ಲಿರುವ ಕರ್ತೃತ್ವವು ದೇಹೇಂದ್ರಿಯಗಳ ಅಭಿಮಾನವೆಂಬ ಉಪಾಧಿಯಿಂದ ತೋರುತ್ತಿರುವ ಭ್ರಾಂತಿಯೇ ಎಂದು ಸಿದ್ಧವಾಯಿತು.

## ಪ್ರತ್ಯಕ್ಷಾದಿಗಳಲ್ಲಿಯೂ ಆತ್ಮನು ತೋರುತ್ತಿರುವನು

೨೧. **ಶಿಷ್ಯ**:— ಅರಿವು ಪ್ರಮಾಣಗಳ ಫಲವೂ ಆಗಿದೆ, ಕೂಟಸ್ಥನಿತ್ಯವಾಗಿರುವ ಆತ್ಮಜ್ಯೋತಿಯ ಸ್ವರೂಪವಾಗಿಯೂ ಇದೆ ಎಂದು ಹೇಳುವದು ವಿರುದ್ಧವಲ್ಲವೆ?

**ಗುರು**:—ವಿರುದ್ಧವಲ್ಲ. ಹೇಗೆಂದರೆ, (ಈ ಅರಿವು) ಕೂಟಸ್ಥನಿತ್ಯವಾಗಿದ್ದರೂ ಪ್ರತ್ಯಕ್ಷವೇ ಮುಂತಾದ ಪ್ರತ್ಯಯಗಳ ಕೊನೆಯಲ್ಲಿ ಕಾಣಿಸಿಕೊಳ್ಳುವದು; ಏಕೆಂದರೆ (ಪ್ರತ್ಯಕ್ಷವೇ ಮುಂತಾದವುಗಳಿಗೆ ಆ ಅರಿವನ್ನು ತೋರಿಸಿಕೊಡು)ವದೇ ಪ್ರಯೋಜನವು. ಪ್ರತ್ಯಕ್ಷವೇ ಮುಂತಾದ ಪ್ರತ್ಯಯಗಳು ಅನಿತ್ಯವಾಗಿರುವದರಿಂದ (ಈ ಅರಿವೂ) ಅನಿತ್ಯವಾಗಿರುವಂತೆ ತೋರುವದು. ಆದ್ದರಿಂದ ಉಪಚಾರಕ್ಕಾಗಿ (ಇದನ್ನು) ಪ್ರಮಾಣಗಳ ಫಲವೆಂದು ಕರೆಯುತ್ತಾರೆ.

**ಪ್ರತ್ಯಕ್ಷಾದಿಪ್ರಮಾಣಗಳ ಫಲವಾಗಿರುವ ಚೈತನ್ಯವೂ ನಿತ್ಯಸಿದ್ಧವಾಗಿರುವ ಕೂಟಸ್ಥವಾಗಿರುವ ಆತ್ಮಚೈತನ್ಯವೂ ಒಂದೇ ಎಂಬುದನ್ನು**

ಗಳಸೆಯ ಖಂಡವೇ ಮುಂತಾದ ಅನೇಕ ಕಡೆಗಳಲ್ಲಿ ಹೇಳಿರುತ್ತದೆ. ಇಲ್ಲಿ ಪ್ರತ್ಯಕ್ಷಾದಿಪ್ರಮಾಣಗಳಲ್ಲಿ ಕೂಡ ಆತ್ಮನನ್ನು ಗುರುತಿಸಬಹುದೆಂಬುದನ್ನು ತಿಳಿಸಿ ಉಪಸಂಹಾರರೂಪವಾಗಿ ಇದೇ ವಿಷಯವನ್ನು ತಿಳಿಸಿರುತ್ತದೆ. ಪ್ರತ್ಯಕ್ಷಾದಿಪ್ರಮಾಣಗಳ ವ್ಯಾಪಾರವನ್ನು ನೋಡುತ್ತಿರುವ ಚೈತನ್ಯವೇ ಆತ್ಮನು; ಆದ್ದರಿಂದ ಪ್ರಮಾಣಪ್ರಮೇಯ ವ್ಯವಹಾರವು ಕೂಡ ಈ ಅರಿವಿನ ಬಲದಿಂದಲೇ ಸಿದ್ಧವಾಗುವದು. ಆದರೆ ಪ್ರಮಾಣವ್ಯಾಪಾರದ ಕೊನೆಗೆ ಫಲದಂತೆ ತೋರುವ ಚೈತನ್ಯವು ಆಯಾ ಪ್ರತ್ಯಯಗಳಿಂದ ಉಪಹಿತವಾಗಿರುವದರಿಂದ ಪ್ರತ್ಯಯಗಳು ನಾಶವಾದರೆ ತಾನೂ ನಾಶವಾಗುವಂತೆ ತೋರುವದು; ಆ ನಾಶವನ್ನು ನೋಡುತ್ತಿರುವ ಸಾಕ್ಷಿಯಾದ ಚೈತನ್ಯವೂ ಮೊದಲಿಂದ ಸಿದ್ಧವಾಗಿರುವ ಆತ್ಮನೆ.

ಪ್ರತಿಯೊಂದು ಪ್ರಮಾಣದಲ್ಲಿಯೂ ನಾವು ಅರಿವೆಂಬ ಫಲವನ್ನು ಕೋರುವೆವಷ್ಟೆ; ಇದರಲ್ಲಿ ಒಂದು ಸೂಕ್ಷ್ಮವಾದ ವಿಷಯವುಂಟು. ಯಾವ ವಸ್ತುವೇ ಆಗಲಿ ಜ್ಞಾತವಾಗಿ, ಎಂದರೆ ಜ್ಞಾನಕ್ಕೆ ಸಂಬಂಧಪಟ್ಟು ಇರಬಲ್ಲದೇ ಹೊರತು ತನಗೆ ತಾನೇ ಇರಲಾರದು. ಆದ್ದರಿಂದ ವಸ್ತುವಿದೆಯೆಂದು ಸಿದ್ಧವಾಗುವದೆಂದರೂ ಒಂದೇ, ಅರಿವಿಗೆ ಸಂಬಂಧಿಸಿ ಸಿದ್ಧವಾಗುವದೆಂದರೂ ಒಂದೇ. ಯಾವ ಅರಿವಿಗೆ ಸಂಬಂಧಿಸಿ ಸಿದ್ಧಿಯಾಯಿತೆಂದು ವ್ಯವಹಾರಮಾಡುವೆವೋ, ಆ ಅರಿವೇ ಆಯಾ ಪ್ರಮಾಣದ ಫಲವಾದ ಸಿದ್ಧಿಯೆನಿಸಿಕೊಳ್ಳುವದು. ಈ ದೃಷ್ಟಿಯಿಂದ ನೋಡಿದರೆ ಯಾವ ಯಾವಾಗ ಪದಾರ್ಥವನ್ನು ಅರಿಯುವೆವೋ ಆಗಾಗ ನಿತ್ಯಸಿದ್ಧವಾದ ಚೈತನ್ಯಕ್ಕೆ ವಸ್ತುವನ್ನು ಸಂಬಂಧಿಸಿಕೊಳ್ಳುತ್ತಲೇ ಇರುವೆವು. ಪ್ರಮಾತೃಪ್ರಮೇಯಗಳು ಬೇರೆಯಾಗಿರದೆ, ಚೈತನ್ಯರೂಪವಾದ ಫಲದಲ್ಲಿ ಏಕವಾದರೆ, ಆಯಾ ವಸ್ತುವಿನ ಜ್ಞಾನವಾಯಿತೆಂಬ ವ್ಯವಹಾರವುಂಟಾಗುವದು. ಹೀಗೆ ಆ ಚೈತನ್ಯವು ಕೂಟಸ್ಥನಿತ್ಯವಾಗಿರುವದೆಂಬುದನ್ನೂ ವ್ಯವಹಾರದಲ್ಲಿ ಮಾತೃಮೇಯ

ವೆಂಬ ವಿಭಾಗವನ್ನು ಪಡೆಯುವದೆಂಬುದನ್ನೂ ಪ್ರತಿಯೊಂದು ಪ್ರಮಾಣವೂ ತನ್ನ ಫಲದ ಮೂಲಕ ನಮಗೆ ತಿಳಿಸಿಕೊಡುತ್ತಿರುವದು.

## ಉಪಸಂಹಾರ

೨೨. **ಶಿಷ್ಯ:**— ಪೂಜ್ಯರೆ, ಹಾಗಾದರೆ ಕೂಟಸ್ಥನಿತ್ಯವಾದ ಅರಿವು ಆತ್ಮಜ್ಯೋತಿಯ ಸ್ವರೂಪವಾಗಿಯೇ ಇದ್ದುಕೊಂಡು ಆತ್ಮನಲ್ಲಿ ತಾನೇ ಸಿದ್ಧವಾಗಿರುವದು. ಏಕೆಂದರೆ (ಇದಕ್ಕೆ) ಯಾವ ಪ್ರಮಾಣವೂ ಬೇಕಿರುವದಿಲ್ಲ. ಅದಕ್ಕಿಂತ ಬೇರೆಯಾಗಿರುವ ಅಚೇತನ(ವಸ್ತುವೆಲ್ಲ) ಒಂದಕ್ಕೊಂದು ಸೇರಿಕೊಂಡು ಕೆಲಸ ಮಾಡುತ್ತಿರುವದರಿಂದ ಮತ್ತೊಂದಕ್ಕಾಗಿರತಕ್ಕದ್ದು. ಅನಾತ್ಮವು ಸುಖ, ದುಃಖ, ಮೋಹ- ಎಂಬ ಪ್ರತ್ಯಯಗಳ ಯಾವ ಅರಿವಿನ ರೂಪದಿಂದ ಮತ್ತೊಂದಕ್ಕಾಗಿ ಇರುವದೋ, ಆ ರೂಪದಿಂದಲೇ (ಅದು) ಇರುವದೇ ಹೊರತು ಬೇರೆ ರೂಪದಿಂದ ಅದು ಇರುವದಿಲ್ಲ; ಆದ್ದರಿಂದ ಪರಮಾರ್ಥವಾಗಿ (ನೋಡಿದರೆ) ಇರುವದೇ ಇಲ್ಲ.

ಲೋಕದಲ್ಲಿ ಹಗ್ಗದ ಹಾವು, ಬಿಸಿಲುಕುದುರೆಯ ನೀರು– ಮುಂತಾದವುಗಳು ತಮ್ಮ ಅರಿವಿಗಿಂತ ಬೇರೆಯಾಗಿ ಇರುವದಿಲ್ಲ ವೆಂದು ಹೇಗೆ ಗೊತ್ತಾಗಿರುವದೋ ಇದರಂತೆಯೇ ಜಾಗ್ರತ್ಸ್ವಪ್ನ ಗಳೆಂಬ ದ್ವೈತವೂ ತನ್ನ ಅರಿವನ್ನು ಬಿಟ್ಟು ಬೇರೆಯಾಗಿರುವ ದಿಲ್ಲವೆಂಬುದೇ ಯುಕ್ತವಾದದ್ದು. ಮತ್ತು ಪೂಜ್ಯರೆ, ನಿಜವಾಗಿ ನೋಡಿದರೆ, ಆತ್ಮನ ಬೆಳಕಾಗಿರುವ ಅರಿವು ಕಡಿವಡೆಯದೆ ಇರು ವದರಿಂದ ಕೂಟಸ್ಥನಿತ್ಯವೆಂದೂ ಅದ್ವೈತವಾಗಿರುವದೆಂದೂ (ಸಿದ್ಧ ವಾಗುವದು) ; ಏಕೆಂದರೆ ಬೇರೆಬೇರೆಯಾಗಿ ಉಂಟಾಗುವ ಪ್ರತ್ಯಯಗಳಲ್ಲೆಲ್ಲ ತಪ್ಪದೆ ಇದು ಇದ್ದುಕೊಂಡೇ ಇರುವದು.

ಆದರೆ ಆ ಬೇರೆ ಬೇರೆ ಪ್ರತ್ಯಯಗಳು ಅರಿವನ್ನು ಬಿಟ್ಟು ಹೋಗು ತ್ತಿರುವವು. ಹೇಗೆ ಸ್ವಪ್ನದಲ್ಲಿ ( ಕಾಣುವ ) ಕಪ್ಪು, ಹಳದಿ– ಮುಂತಾದ ಬೇರೆ ಬೇರೆ ರೂಪವಾಗಿ ತೋರುವ ಪ್ರತ್ಯಯಗಳು ತಮ್ಮ ಅರಿವನ್ನು ಬಿಟ್ಟು ಹೋಗುವದರಿಂದ ನಿಜವಾಗಿ ಇಲ್ಲವೆಂದು ಹೇಳುತ್ತಾರೋ, ಇದರಂತೆಯೆ ಎಚ್ಚರದಲ್ಲಿ ತೋರುವ ಕಪ್ಪು, ಹಳದಿ- ಮುಂತಾದ ಬೇರೆ ಬೇರೆ ಪ್ರತ್ಯಯಭೇದಗಳೂ ಆ ಅರಿ ವನ್ನೇ ಬಿಟ್ಟು ಹೋಗುತ್ತಿರುವದರಿಂದ, (ಅವೂ) ಅಸತ್ಯರೂಪ ವಾಗಿಯೇ ಇರಬೇಕಾಯಿತು. ಈ ಅರಿವೆಂಬುದಕ್ಕೆ (ತನಗಿಂತ) ಬೇರೆಯಾದ ಅರಿವಾತನು ಇರುವದಿಲ್ಲವಾದ್ದರಿಂದ (ಅದು) ತನ್ನ ಸ್ವರೂಪದಿಂದ ತಾನು ತೆಗೆದುಕೊಳ್ಳುವದಕ್ಕಾಗಲಿ ಬಿಡುವದ ಕ್ಕಾಗಲಿ ಆಗುವದಿಲ್ಲ, (ತನಗಿಂತ) ಬೇರೊಂದು (ವಸ್ತುವೂ) ಇಲ್ಲದ್ದ ರಿಂದ (ಮತ್ತೊಂದರಿಂದಲೂ ಅದನ್ನು ಹಿಡಿಯುವದಕ್ಕಾಗಲಿ ಬಿಡುವದಕ್ಕಾಗಲಿ ಆಗುವದಿಲ್ಲ.)

**ಗುರು:**—ಹಾಗೆಯೇ ಸರಿ. ಜಾಗ್ರತ್ಸ್ವಪ್ನವೆಂಬ ಸಂಸಾ ರಕ್ಕೆ ನಿಮಿತ್ತವಾಗಿರುವ ಇದೇ ಅವಿದ್ಯೆಯು ; ಈ ಅವಿದ್ಯೆಯನ್ನು ವಿದ್ಯೆಯು ಹೋಗಲಾಡಿಸುವದು. ಈ ರೀತಿಯಿಂದ ನೀನು ಅಭಯವನ್ನು ಹೊಂದಿರುವೆ. ಇನ್ನು ಮೇಲೆ ಜಾಗ್ರತ್ಸ್ವಪ್ನಗಳ ದುಃಖವನ್ನು ಅನುಭವಿಸುವದಿಲ್ಲ, ಸಂಸಾರದುಃಖದಿಂದ ಬಿಡುಗಡೆ ಹೊಂದಿದ್ದೀಯೆ.

**ಶಿಷ್ಯ:**— ಹೌದು (ಸ್ವಾಮಿ).

---

**ಶಿಷ್ಯನು ಈ ವಿಚಾರದಿಂದ ತಾನು ಮನಗಂಡ ವಿಷಯಗಳನ್ನು ಮತ್ತೆ ಒಕ್ಕಡೆಗೆ ಸೇರಿಸಿ ಹೇಳಿರುತ್ತಾನೆ. ಇವುಗಳು ಯಾವವೆಂದರೆ,**

(೧) ಅವಗತಿಯು, ಎಂದರೆ ಅರಿವು ಕೂಟಸ್ಥಸತ್ಯವಾಗಿರುವದು. ಇದು ಮತ್ತೊಂದು ಪ್ರಮಾಣವನ್ನು ಬಯಸುವದಿಲ್ಲ, ತಾನೇ ಸಿದ್ಧವಾಗಿರುವದು. ಪ್ರಮಾಣಪ್ರಮೇಯವ್ಯವಹಾರವೆಲ್ಲ ಇದರ ಬಲದಿಂದ ಸಿದ್ಧವಾಗತಕ್ಕದ್ದಾಗಿರುವದು. ಇದೇ ಆತ್ಮನು.

(೨) ಅನಾತ್ಮವಸ್ತುವೆಂಬುದು ನಿಜವಾಗಿ ಆತ್ಮನಿಗಿಂತ ಬೇರೆಯಾಗಿ ಇರುವದಿಲ್ಲ. ಎಚ್ಚರಕನಸುಗಳೆಂಬ ಅವಸ್ಥೆಗಳೂ ಅವುಗಳಲ್ಲಿ ತೋರುವ ಗ್ರಾಹ್ಯಗ್ರಾಹಕರೂಪವಾದ ವಸ್ತುಗಳೂ ನಿಜವಾಗಿ ಈ ಆತ್ಮಚೈತನ್ಯವೇ. ಹಗ್ಗದಲ್ಲಿ ತೋರುವ ಹಾವೆಂಬುದು ತೋರಿಕೆಯ ಕಾಲದಲ್ಲಿಯೂ ಹಾವಿನ ಅರಿವಿಗಿಂತ ಬೇರೆಯಾಗಿಲ್ಲದಿರುವಂತೆ, ಎಚ್ಚರಕನಸುಗಳೆಂಬ ದ್ವೈತಪ್ರಪಂಚವು ಅದನ್ನು ಅರಿಯುವ ಸಾಕ್ಷಿಚೈತನ್ಯಕ್ಕಿಂತ ಬೇರೆಯಾಗಿರುವದಿಲ್ಲ. ಈ ಅರಿವಿನ ರೂಪದಲ್ಲಿ ಅವು ಸತ್ಯವಾಗಿರುವವು; ತಮ್ಮ ತೋರಿಕೆಯ ರೂಪದಲ್ಲಿ ಮಿಥ್ಯೆ, ಎಂದಿಗೂ ಎಲ್ಲಿಯೂ ಇರುವದಿಲ್ಲ.

(೩) ಕನಸಿನಲ್ಲಿ ತೋರುವ ಪ್ರಪಂಚವು ತನ್ನ ಅರಿವು ಇರುತ್ತಿದ್ದರೂ ಆ ಅರಿವನ್ನು ಬಿಟ್ಟು ಹೋಗುತ್ತಿರುವದರಿಂದ ಅತ್ಯಂತವಾಗಿ ಅಸತ್ಯವೆಂದು ನಿಶ್ಚಯಿಸುವಂತೆ, ಎಚ್ಚರದಲ್ಲಿ ತೋರುವ ಪ್ರಪಂಚವೂ ತನ್ನ ಅರಿವನ್ನು ಬಿಟ್ಟು ಹೋಗುತ್ತಿರುವದರಿಂದ ಅದೂ ಅಸತ್ಯವೆಂದೇ ನಿಶ್ಚಯಿಸಬಹುದು. ಎಚ್ಚರವನ್ನೂ ಕನಸನ್ನೂ ನೋಡುತ್ತಿರುವ ಅರಿವು ಒಂದವಸ್ಥೆಯಲ್ಲಿ ಮತ್ತೊಂದರ ಮುಸುಕನ್ನು ತೆಗೆದುಕೊಂಡು ಬರುವದಿಲ್ಲ. ಎರಡವಸ್ಥೆಗಳನ್ನೂ ನೋಡುತ್ತಿರುವೆನೆಂಬ ಅರಿವಿನಿಂದಲೇ ಅವು ಆ ಅರಿವನ್ನು ಬಿಟ್ಟು ಹೋಗುವವೆಂಬುದನ್ನು ನಿಶ್ಚಯಿಸಬಹುದು. ಸುಷುಪ್ತಿಯಲ್ಲಿ ಇವೆರಡನ್ನೂ ಚೈತನ್ಯವು ಹೊಡೆದೋಡಿಸಿ ತಾನೇ ತಾನಾಗಿರುವದು. ಈ ಎಲ್ಲಾ ಕಾರಣಗಳಿಂದ ಯಾವಾಗಲೂ ಒಂದೇ ರೂಪದಲ್ಲಿರುವ ಆತ್ಮಚೈತನ್ಯವು ಅದ್ವಯವಾಗಿರುವದು, ಇದಕ್ಕಿಂತ ಬೇರೆಯಾದ ವಸ್ತುವೇ ಇರುವದಿಲ್ಲ.

(೪) ಆತ್ಮಚೈತನ್ಯವು ಎಲ್ಲವನ್ನೂ ಅರಿಯುವದು, ಅದನ್ನು ಅರಿಯುವ ಮತ್ತೊಂದು ವಸ್ತುವಿಲ್ಲ; ಅದು ತನ್ನನ್ನು ತಾನು ಅರಿಯುವದೂ ಇಲ್ಲ, ತನ್ನನ್ನು ತಾನು ಮರೆಯುವದೂ ಇಲ್ಲ. ಯಾವಾಗಲೂ ತನಗೆ ತಾನೇ ಬೆಳಗುತ್ತಿರುವ ಸ್ವಭಾವದ್ದಾಗಿರುವದು.

ಗುರುವು ಈ ತೀರ್ಮಾನಗಳನ್ನೆಲ್ಲ ಒಪ್ಪಿ ವಿಚಾರದ ಉಪಸಂಹಾರ ರೂಪದಲ್ಲಿ ಹೇಳಿರುವ ಎರಡು ಮುಖ್ಯವಿಷಯವೇನಂದರೆ–

(೧) ಅವಸ್ಥೆಗಳನ್ನು ಪೂರ್ಣವಾಗಿ ವಿಚಾರಿಸದೆ ಎಚ್ಚರದಲ್ಲಿ ತೋರುವ ಪ್ರಪಂಚವೇ ಸತ್ಯವೆಂದೂ ಅದರಲ್ಲಿ ದೇಹೇಂದ್ರಿಯಾದಿಗಳಿಂದ ಕೂಡಿದ ತಾನು ಅನೇಕರೊಂದಿಗೆ ಇರುವೆನೆಂದೂ ಜಾಗ್ರತ್ಸ್ವಪ್ನಗಳಲ್ಲಿ ಅನೇಕ ದೃಶ್ಯಗಳನ್ನು ಕಾಣುತ್ತಿರುವೆನೆಂದೂ ಅವುಗಳಿಂದ ತನಗೆ ಸುಖದುಃಖಗಳು ಒದಗುತ್ತಿರುವವೆಂದೂ ತಿಳಿಯುವದೇ **ಅವಿದ್ಯೆ**. ಈ ಅವಿದ್ಯೆಯಿಂದ ಪಡೆಯುವ ಜಾಗ್ರತ್ಸ್ವಪ್ನಗಳ ಅನುಭವವೇ ಸಂಸಾರವು.

(೨) ಅವಸ್ಥಾತ್ರಯಗಳ ಪೂರ್ಣಪರೀಕ್ಷೆಯಿಂದ ಕೂಟಸ್ಥನಿತ್ಯವಾಗಿಯೂ ಸ್ವಯಂಜ್ಯೋತಿಯಾಗಿಯೂ ಅದ್ವಯವಾಗಿಯೂ ಇರುವ ತನ್ನ ಸ್ವರೂಪವನ್ನು ಮನಗಾಣುವದೇ **ವಿದ್ಯೆ**. ಇದರಿಂದ ಸಂಸಾರದುಃಖವು ಬಿಡುಗಡೆಯಾಗುವದು.



# ಎರಡನೆಯ ಪ್ರಕರಣದ ಸಾರ

---

[ಅಂಕೆಗಳು ಮೂಲದಲ್ಲಿರುವ ಖಂಡಗಳ ಸಂಖ್ಯೆಯನ್ನು ಸೂಚಿಸುವವು]

೧–೪ ನಮ್ಮೆಲ್ಲರ ಆತ್ಮನು ಸಂಸಾರದ ಸೋಂಕೇ ಇಲ್ಲದ ಪರಮಾತ್ಮನಾಗಿದ್ದರೂ ನಾವು ಕರ್ತೃತ್ವಭೋಕ್ತೃತ್ವವೆಂಬ ಸಂಸಾರವನ್ನು ಇವನಲ್ಲಿ ಹುಟ್ಟುಗಟ್ಟಿಕೊಂಡು ಜಾಗ್ರತ್ಸ್ವಪ್ನಗಳಲ್ಲಿ ನಾವು ಪಡುತ್ತಿರುವ ಸಂಸಾರದುಃಖವು ಸತ್ಯವೆಂದೂ ಅದು ನಮ್ಮ ಸ್ವಭಾವವೆಂದೂ ತಿಳಿದುಕೊಂಡಿರುವೆವು. ಈ ತಪ್ಪುತಿಳಿವಿಗೆ **ಅವಿದ್ಯೆ**ಯೆಂದು ಹೆಸರು.

೫–೬ ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳಿಂದ ನಾವು ಸಂಸಾರಿಗಳೆಂದು ನಿಶ್ಚಯವಾಗುತ್ತಿರುವದರಿಂದ ನಾವು ಪರಮಾತ್ಮಸ್ವರೂಪರೆಂಬುದು ಸರಿಯಲ್ಲವೆಂತಲೂ, ನಾವು ನಿತ್ಯಮುಕ್ತಸ್ವರೂಪರೆಂದು ನಮಗೆ ಯಾರಿಗೂ ಎಂದಿಗೂ ತಿಳಿದಿಲ್ಲವಾದ್ದರಿಂದ ನಮಗೆ ಯಾವ ಪ್ರಮಾಣದಿಂದಲೂ ಗೋಚರವಾಗದ ಆ ಸ್ವರೂಪದಲ್ಲಿ ನಾವು ಸಂಸಾರವನ್ನು ಹುಟ್ಟುಗಟ್ಟಿಕೊಂಡಿರುವೆವೆಂಬುದು ನಂಬುವದಕ್ಕಾಗದ ಮಾತೆಂದೂ ಕೆಲವರು ಭಾವಿಸುವರು. ಆದರೆ ಇದು ಸರಿಯಲ್ಲ; ಏಕೆಂದರೆ ಆತ್ಮನು ಯಾವ ಪ್ರಮಾಣದಿಂದಲೂ ಸಿದ್ಧನಾಗಬೇಕಾಗಿಲ್ಲ, ಅವನು ಸ್ವತಃಸಿದ್ಧನಾಗಿರುತ್ತಾನೆ.

ಇನ್ನೂ ಕೆಲವರು ಆತ್ಮನು ಅಹಂಪ್ರತ್ಯಯಕ್ಕೆ ವಿಷಯನಾಗಿ ಸ್ಪಷ್ಟವಾಗಿ ಗೊತ್ತೇ ಆಗಿರುವದರಿಂದ ಆತ್ಮಸ್ವರೂಪವನ್ನು ನಾವು ಅರಿಯೆವೆಂದಾಗಲಿ ಅವನಲ್ಲಿ ಸಂಸಾರವನ್ನು ಹುಟ್ಟುಗಟ್ಟಿರುವೆವೆಂದಾಗಲಿ ಹೇಳುವದು ಸರಿಯಲ್ಲವೆನ್ನುವರು. ಇದೂ ಸರಿಯಲ್ಲ. ಏಕೆಂ

ದರೆ ಆತ್ಮನು ಅಹಂಪ್ರತ್ಯಯಕ್ಕೆ ವಿಷಯನೆಂದು ತಿಳಿದಿದ್ದರೂ ವಾದಿಗಳು ಆತ್ಮಸ್ವರೂಪದ ವಿಷಯದಲ್ಲಿ ಬೇರೆ ಬೇರೆ ಅಭಿಪ್ರಾಯಗಳನ್ನು ಹೊರಪಡಿಸುತ್ತಲೇ ಇರುವರು; ಆದ್ದರಿಂದ ಆತ್ಮನ ನಿಜವಾದ ಸ್ವರೂಪವು ನಮಗೆ ತಿಳಿದಿಲ್ಲವೆಂದು ಹೇಳಬಹುದಾಗಿರುತ್ತದೆ. ಆತ್ಮಾನಾತ್ಮಗಳ ನಿಜವಾದ ಸ್ವರೂಪವನ್ನರಿಯದೆ ಒಂದರಲ್ಲೊಂದನ್ನು ಹುಟ್ಟುಗಟ್ಟಿರುವದರಿಂದ ನಮಗೆ ಸಂಸಾರದುಃಖವು ಆಗಿರುವದೆಂದೂ ಹೇಳಬಹುದು.

೭-೯. ಆತ್ಮಾನಾತ್ಮಗಳು ಒಂದರಲ್ಲೊಂದು ಹುಟ್ಟುಗಟ್ಟಿಕೊಂಡಿರುವವಲ್ಲವೆಂದೂ ಮನೆಯ ಕಂಬ, ತೊಲೆಗಳು– ಮುಂತಾದವುಗಳಂತೆ ಅವು ಒಂದಕ್ಕೊಂದು ಸೇರಿಕೊಂಡಿರುವವೆಂದೂ ಕೆಲವರು ಅಭಿಪ್ರಾಯಪಡುವರು; ಆದರೆ ಅವರ ಮತವೂ ಸರಿಯಲ್ಲ. ಆ ಪಕ್ಷದಲ್ಲಿ ಆತ್ಮನು ಪರಾರ್ಥನೆಂದೂ ಅನಿತ್ಯನೆಂದೂ ಆಗುತ್ತದೆ. 'ಅದೂ ಆಗಲಿ' ಎಂದರೆ ಪರಾರ್ಥಗಳಾದ ಈ ವಸ್ತುಗಳು ಯಾವದಕ್ಕಾಗಿ ಇರುವವೋ ಅದೇ ನಿಜವಾದ ಆತ್ಮನೆಂದು ಒಪ್ಪಿಕೊಳ್ಳಬೇಕಾಗುವದು.

ಆತ್ಮನೂ ಅನಾತ್ಮವೂ ಎರಡೂ ಒಂದರಲ್ಲೊಂದು ಕಲ್ಪಿತವಾಗಿದ್ದರೂ ಆತ್ಮನಿಗೆ ಕಲ್ಪಿತವಲ್ಲದೆ ಇರುವ ಶುದ್ಧವಾದ ರೂಪವೊಂದು ಇರುವದು. ಈ ರೂಪವು ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳಿಗೆ ವಿಷಯವಲ್ಲವಾದರೂ ಸ್ವತಃಸಿದ್ಧವಾಗಿರುವದು.

೧೦-೧೨. ಹೀಗೆ ಶುದ್ಧವಾಗಿರುವ ಆತ್ಮನ ವಿಷಯದಲ್ಲಿ ನಮಗೆಲ್ಲರಿಗೂ ತಪ್ಪುತಿಳಿವು ಉಂಟಾಗಿರುವದು. ನಮ್ಮನ್ನು ಮತ್ತೆ ಯಾರೂ ಪ್ರೇರಿಸಿ ಈ ತಪ್ಪುತಿಳಿವಿನಲ್ಲಿ ಕೆಡವಿಲ್ಲ; ನಾವೇ ತಪ್ಪಾಗಿ ತಿಳಿದುಕೊಂಡಿದೇವೆ; ನಾವೇ ಸರಿಯಾಗಿ ತಿಳಿದುಕೊಂಡು ಇದರಿಂದ ಪಾರಾಗಬಹುದು. ಹೀಗೆ ತಪ್ಪಾಗಿ ತಿಳಿದುಕೊಂಡಿರುವೆವೆಂಬುದೂ ವ್ಯವಹಾರದೃಷ್ಟಿಯಿಂದ. ನಿಜವಾಗಿ ನೋಡಿದರೆ ನಾವು ಯಾವಾಗಲೂ ಶುದ್ಧವಾದ ಯಾವ ಮಾರ್ಪಾಡುಗಳೂ ಇಲ್ಲದ ಚೈತನ್ಯಸ್ವರೂಪವೇ ಆಗಿರುತ್ತೇವೆ.

೧೩–೧೬. ಬೇರೆ ಬೇರೆ ಜ್ಞಾನಗಳಾಗುವದರಿಂದ ನಮ್ಮ ಸ್ವರೂಪವಾದ ಈ ಚೈತನ್ಯದಲ್ಲಿ ಯಾವ ಮಾರ್ಪಾಡುಗಳೂ ಆಗುವದಿಲ್ಲ. ಮಾರ್ಪಾಡುಗಳನ್ನೆಲ್ಲ ಅರಿಯುತ್ತಿರುವ ಜ್ಞಾನವೇ ಅದಾಗಿರುವದು. ಇಲ್ಲಿ ಜ್ಞಾನವೆಂದರೆ ಮನಸ್ಸಿನಲ್ಲಿ ಆಗುವ ಪ್ರತ್ಯಯವೆಂಬ ಮಾರ್ಪಾಡಲ್ಲ, ಪ್ರತ್ಯಯದ ಕೊನೆಯಲ್ಲಿ ತೋರಿಕೊಳ್ಳುವ ಫಲರೂಪವಾದ ಅರಿವು. ಸರಿಯಾಗಿ ನೋಡಿದರೆ ಇದು ಫಲವೂ ಅಲ್ಲ, ಏಕೆಂದರೆ ಇದು ಯಾವಾಗಲೂ ನಮ್ಮ ಸ್ವರೂಪವೇ ಆಗಿರುತ್ತದೆ. ಪ್ರತ್ಯಯಗಳೆಂಬ ಉಪಾಧಿಯು ಮಾರ್ಪಾಡುಗಳನ್ನು ನಮ್ಮ ಸ್ವರೂಪದಲ್ಲಿ ಹಾಕಿಕೊಳ್ಳುವದರಿಂದ ನಮ್ಮ ಸ್ವರೂಪಚೈತನ್ಯದಲ್ಲಿಯೂ ಮಾರ್ಪಾಡುಗಳುಂಟೆಂಬ ಭ್ರಾಂತಿಗೆ ಕಾರಣವಾಗಿರುವದು.

ಎಚ್ಚರಕನಸುಗಳೆಂಬವೂ ಬಂದುಹೋಗುತ್ತಿರುವದರಿಂದಲೂ, ಈ ಎರಡವಸ್ಥೆಗಳಲ್ಲಿ ಒಂದು ಇರುವ ಕಾಲದಲ್ಲಿ ಮತ್ತೊಂದು ಅತ್ಯಂತವಾಗಿ ಇಲ್ಲದಿರುವದರಿಂದಲೂ, ಅವು ನಮ್ಮ ನಿಜವಾದ ಸ್ವರೂಪಕ್ಕೆ ಅಂಟಿರುವವುಗಳಲ್ಲ. ಇವುಗಳಿಂದ ನಮ್ಮ ಸ್ವರೂಪದಲ್ಲಿ ಯಾವ ಮಾರ್ಪಾಡುಗಳೂ ಆಗುವದಿಲ್ಲ.

ಸುಷುಪ್ತಿಯಲ್ಲಿ ಅನಾತ್ಮವು ಯಾವದೂ ಇಲ್ಲದಿದ್ದರೂ ನಮ್ಮ ಸ್ವರೂಪಚೈತನ್ಯವು ಇದ್ದೇ ಇರುವದು ; ಇದರ ಬಲದಿಂದಲೇ ನಾವು ಆಗ ಏನನ್ನೂ ಕಾಣಲಿಲ್ಲವೆಂದು ಹೇಳುವದು. ಆದ್ದರಿಂದ ಅವಸ್ಥಾತ್ರಯದಿಂದ ನಮ್ಮ ಸ್ವರೂಪದಲ್ಲಿ ಯಾವ ಮಾರ್ಪಾಡುಗಳೂ ಇಲ್ಲವೆಂದೂ ನಾವು ಸ್ವತಃಸಿದ್ಧವಾದ ಚೈತನ್ಯಸ್ವರೂಪವೇ ಎಂದೂ ನಿರ್ಣಯವಾಗುತ್ತದೆ.

೧೭–೧೯. ಎಚ್ಚರದಲ್ಲಿ ನಮಗಾಗುವಂತೆ ತೋರುತ್ತಿರುವ ಜಡಿಯರಿವನ್ನು ಬಿಟ್ಟು ನೋಡಿದರೆ ಅರಿಯುವಾತನು, ಅರಿವು– ಎಂಬ ಭೇದವು ನಿಜವಾಗಿಲ್ಲವೆಂತಲೂ ಉಪಾಧಿಯಿಂದ ಈ ಭೇದವು ಕಲ್ಪಿತವಾಗಿರುವದೆಂತಲೂ ಆತ್ಮನಲ್ಲಿ ನಿತ್ಯವಾಗಿ ಚೈತನ್ಯವೇ ಇರುತ್ತಿರುವದ

ರಿಂದ ಅವನನ್ನು ಯಾವ ಪ್ರಮಾಣದಿಂದಲೂ ಹೊಸದಾಗಿ ಅರಿಯ ಬೇಕಾದದ್ದಿಲ್ಲವೆಂತಲೂ ಸ್ಪಷ್ಟವಾಗುತ್ತದೆ.

೨೦–೨೨. ಆತ್ಮನನ್ನು ಪ್ರಮಾತೃವೆಂದು ಕರೆಯುವದೂ ಉಪ ಚಾರಕ್ಕೆ ; ಏಕೆಂದರೆ ಅವನಲ್ಲಿ ಅರಿಯುವದೆಂಬ ವ್ಯಾಪಾರಾದೇನೂ ಇರು ವದಿಲ್ಲ. ಓಡಾಡದೆ ಯಾವಾಗಲೂ ನಿಂತಿರುವ ಪರ್ವತಗಳನ್ನು ನಿಂತಿವೆ ಯೆಂದು ಹೇಗೆ ಹೇಳುವರೋ ಯಾವಾಗಲೂ ಚೈತನ್ಯಸ್ವರೂಪನಾಗಿ ರುವ ಆತ್ಮನನ್ನು ಅರಿಯುವಾತನೆಂದು ಕರೆಯುವದೂ ಹಾಗೆಯೇ. ಆತ್ಮನು ನಿಜವಾಗಿಯೂ ಕರ್ತೃವೆಂದು ತಿಳಿಯುವವರ ಪಕ್ಷದಲ್ಲಿ ಅಸಂಗೋದಾಸೀನನಾದ ಆತ್ಮನಲ್ಲಿ ಕರ್ತೃತ್ವವಾಗಲಿ ಕರಣಗಳ ಉಪ ಯೋಗವಾಗಲಿ ಹೇಗೆ ಉಂಟಾಯಿತೆಂಬುದನ್ನು ಹೊಂದುಗಡೆಯಾಗಿ ಹೇಳುವದಕ್ಕೆ ಆಗುವದೇ ಇಲ್ಲ.

ಹೀಗೆ ಆತ್ಮನು ಕೂಟಸ್ಥನಿತ್ಯನೂ ಸ್ವತಃಸಿದ್ಧನೂ ಆಗಿರುತ್ತಾನೆ. ಅನಾತ್ಮವು ವ್ಯಾಪಾರಾದುಗಳುಳ್ಳದ್ದೂ ಆತ್ಮಚೈತನ್ಯಕ್ಕೆ ವಶವಾದ ಇರ ವುಳ್ಳದ್ದೂ ಆಗಿರುತ್ತದೆ; ಅನಾತ್ಮವು ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾಗುವಾಗ ಕೊನೆಯಲ್ಲಿ ಆದಂತೆ ತೋರುವ ಫಲರೂಪವಾದ ಅರಿವೂ ನಿಜವಾಗಿ ಆತ್ಮನ ನಿತ್ಯಸಿದ್ಧರೂಪವೇ ಆಗಿರುವದು.

ಈ ಎಲ್ಲಾ ಕಾರಣಗಳಿಂದ ಅನಾತ್ಮವು ತನಗೆ ತಾನೇ ಇರುವದೆಂ ದಾಗಲಿ, ಆತ್ಮನಲ್ಲಿ ಅನಾತ್ಮಸಂಬಂಧವು ನಿಜವಾಗಿ ಇರುವದೆಂದಾಗಲಿ ಜಾಗ್ರತ್ಸ್ವಪ್ನರೂಪವಾದ ಸಂಸಾರವು ಆತ್ಮನಲ್ಲಿ ನಿಜವಾಗಿ ಇರುತ್ತಿ ರುವದೆಂದಾಗಲಿ, ತಿಳಿಯುವದು ತಪ್ಪುತಿಳಿವಳಿಕೆಯೇ. ನಿಜವಾಗಿ ನೋಡಿದರೆ ಆತ್ಮನು ಯಾವಾಗಲೂ ನಿತ್ಯಶುದ್ಧನಾದ ಕೂಟಸ್ಥನಾಗಿ ತನಗೆರಡನೆಯದಿಲ್ಲದ ಚೈತನ್ಯಸ್ವರೂಪನಾಗಿಯೇ ಇರುವನೆಂದು ನಿಶ್ಚಯವಾಗುವದು.

---

# ೩. ಅಸಙ್ಗಾತ್ಮಪರಿಸಂಖ್ಯಾನ

## ಪರಿಸಂಖ್ಯಾನದ ಉಪಯೋಗ

೧. (ಇದುವರೆಗೆ ತಾವು) ಕೂಡಿಹಾಕಿಕೊಂಡಿರುವ ಪುಣ್ಯ ಪಾಪಗಳನ್ನು ನಾಶಗೊಳಿಸುವದರಲ್ಲಿ ತತ್ಪರರಾಗಿಯೂ ಹೊಸದಾಗಿ (ಇವುಗಳನ್ನು) ಕೂಡಿಹಾಕಬಾರದೆಂದು ಬಯಸುವವರಾಗಿಯೂ ಇರುವ ಮುಮುಕ್ಷುಗಳಿಗಾಗಿ ಈ ಪರಿಸಂಖ್ಯಾನವನ್ನು ಹೇಳುತ್ತೇವೆ. ಅವಿದ್ಯೆಯಿಂದುಂಟಾದ ದೋಷಗಳು ಮನಸ್ಸು, ವಾಕ್ಕು, ಶರೀರ– ಇವುಗಳು ಪ್ರವೃತ್ತಿಗೆ ಕಾರಣವಾಗಿರುತ್ತವೆ; ಮತ್ತು ಪ್ರವೃತ್ತಿಯಿಂದ (ತಮಗೆ) ಬೇಕಾದದ್ದು, ಬೇಡವಾದದ್ದು, ಮತ್ತು ಮಿಶ್ರವಾದದ್ದು– ಎಂಬ (ಮೂರು ಬಗೆಯ) ಫಲವನ್ನು ಕೊಡುವ ಕರ್ಮಗಳು ಬೆಳೆದುಕೊಳ್ಳುತ್ತವೆ. ಆದ್ದರಿಂದ ಅವುಗಳಿಂದ ಬಿಡುಗಡೆಯಾಗುವದಕ್ಕೆ ಈ ಪರಿಸಂಖ್ಯಾನವನ್ನು ಮಾಡಬೇಕು.

['ಪರಿಸಂಖ್ಯಾನವನ್ನು'– ಧ್ಯಾನವನ್ನು. 'ಬಿಡುಗಡೆಯಾಗುವದಕ್ಕೆ'– ಇವೆಲ್ಲಕ್ಕೂ ಕಾರಣವಾಗಿರುವ ಅವಿದ್ಯೆಯ ವಾಸನೆಯನ್ನು ನಿಜದ ತಿಳಿವಳಿಕೆಯಾದ ವಿದ್ಯೆಯ ನೆನಪಿನಿಂದ ಹೋಗಲಾಡಿಸಿಕೊಳ್ಳುವದಕ್ಕೆ.]

ಬ್ರಹ್ಮಸ್ವರೂಪವನ್ನು ಶ್ರುತಿಪ್ರಮಾಣಕ್ಕನುಗುಣವಾಗಿ ತಿಳಿಸಿ ಬ್ರಹ್ಮಾತ್ಮೈಕತ್ವವನ್ನು ಮೊದಲನೆಯ ಪ್ರಕರಣದಲ್ಲಿ ವಿವರಿಸಿದ್ದಾಯಿತು. ನಮ್ಮೆಲ್ಲರಿಗೂ ಪ್ರಸಿದ್ಧವಾಗಿರುವ ಆತ್ಮಸ್ವರೂಪವನ್ನು ಅವಸ್ಥಾತ್ರಯಕ್ರಮದಿಂದ ಗೊತ್ತುಪಡಿಸುವದರ ಮೂಲಕವೂ ಈ ಬ್ರಹ್ಮಾತ್ಮೈಕತ್ವವನ್ನು ಎರಡನೆಯ ಪ್ರಕರಣದಲ್ಲಿ ಗಟ್ಟಿಗೊಳಿಸಿದ್ದಾಯಿತು.

ಯಾರಿಗೆ ಹಿಂದಿನ ಪ್ರಕರಣದಲ್ಲಿ ಹೇಳಿರುವ ಯುಕ್ತಿಗಳಿಂದ ಈ ತತ್ತ್ವವು ನಿಶ್ಚಯವಾಗಿ ಅನುಭವಕ್ಕೆ ಬಂದಿರುವದೋ ಅಂಥವರು ಕೃತಕೃತ್ಯರು ; ಅವರು ಮುಕ್ತಿಗಾಗಿ ಮತ್ತೇನೂ ಮಾಡಬೇಕಾದದ್ದೇ ಇಲ್ಲ. ಆದರೆ ಯಾರಿಗೆ ಇದು ಚೆನ್ನಾಗಿ ದೃಢವಾಗಿರುವದಿಲ್ಲವೋ ಅವರು ಆತ್ಮಸ್ವರೂಪ ವನ್ನು ಸ್ಫುಟಗೊಳಿಸುವ ಶಾಸ್ತ್ರವಚನಗಳನ್ನೂ ಯುಕ್ತಿಗಳನ್ನೂ ಮನ ಸ್ಸಿನಲ್ಲಿ ಮತ್ತೆಮತ್ತೆ ಅಳೆದಳೆದುಹೊಯ್ಯುತ್ತಿರಬೇಕು. ಇದು ತತ್ತ್ವಸಾಕ್ಷಾತ್ಕಾರವುಂಟಾಗುವದಕ್ಕೆ ಕಾರಣವಾಗುವದು.

ಹಿಂದಕ್ಕೆ **ಪ್ರಸಂಖ್ಯಾನವಾದಿ**ಗಳೆಂಬವರು ಕೆಲವರು ವೇದಾಂತಿ ಗಳಿದ್ದರು. ಅವರು ಹೀಗೆಂದು ಹೇಳುತ್ತಿದ್ದರು: ಉಪನಿಷತ್ತುಗಳ ಅಭಿಪ್ರಾಯವನ್ನು ತಿಳಿದುಕೊಂಡ ಮಾತ್ರದಿಂದಲೇ ಅಜ್ಞಾನವು ಹೋಗು ವದಿಲ್ಲ; ಶಾಸ್ತ್ರವಾಕ್ಯಾರ್ಥವನ್ನು ತಿಳಿದುಕೊಂಡ ಮೇಲೂ ಮತ್ತೆ ಮತ್ತೆ ಅದೇ ವಿಷಯವನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಿರಬೇಕು. ಹೀಗೆ ಮಾಡುತ್ತಿದ್ದರೆ ಕೊನೆಯಲ್ಲಿ ಹುಟ್ಟುವ ಜ್ಞಾನದಿಂದ ಮೋಕ್ಷ ವಾಗುವದು. ಇದೊಂದು ಪಕ್ಷ. ಉಪನಿಷದ್ವಾಕ್ಯದಿಂದ ಹುಟ್ಟುವ ಜ್ಞಾನವೇನೋ ಸರಿಯಾದ ಜ್ಞಾನವೇ ಆದರೂ ಅದು ಹುಟ್ಟಿದ ಮಾತ್ರ ದಿಂದ ಅಜ್ಞಾನವು ಪೂರ್ಣವಾಗಿ ಹೋಗುವದಿಲ್ಲ ; ಬಹುಕಾಲದವರೆಗೆ ಇದನ್ನು ಭಾವನೆಮಾಡುತ್ತಿದ್ದರೆ ಕೊನೆಗೆ ಅಜ್ಞಾನವೆಲ್ಲ ಪೂರ್ಣವಾಗಿ ಹೋಗುವದು- ಎಂದು ಮತ್ತೆ ಕೆಲವರು ಹೇಳುತ್ತಿದ್ದರು. ಈ ಇಬ್ಬರು ವಾದಿಗಳಲ್ಲಿ ಮೊದಲನೆಯವರ ಮತದಲ್ಲಿ ಉಪನಿಷದ್ವಾಕ್ಯಗಳ ಅರ್ಥ ವನ್ನು ಅರಿತಮೇಲೂ ಸರಿಯಾದ ಬ್ರಹ್ಮಜ್ಞಾನವಾಗುವದಿಲ್ಲವಾದ್ದರಿಂದ ಆ ಜ್ಞಾನಕ್ಕಾಗಿ ಧ್ಯಾನವು ಅವಶ್ಯವಾಗಿರುವದು ; ಎರಡನೆಯವರ ಮತದಲ್ಲಿ ಉಪನಿಷದರ್ಥದ ಅರಿವೇ ಬ್ರಹ್ಮಜ್ಞಾನವಾದರೂ ಅದು ಪಕ್ವ ವಾಗಿ ಕಾರ್ಯಕಾರಿಯಾಗುವದಕ್ಕಾಗಿ ಧ್ಯಾನವು ಅವಶ್ಯವಾಗಿರುವದು. ಈ ಎರಡು ಪಕ್ಷಗಳೂ ಸರಿಯಲ್ಲವೆಂದೂ ಧ್ಯಾನವೆಂಬುದು ವೇದಾಂತ ಜ್ಞಾನವನ್ನು ಸಂಪಾದಿಸಿಕೊಳ್ಳುವ ಮೊದಲು ಮಾಡತಕ್ಕದ್ದೇ ಹೊರತು ಉಪನಿಷತ್ತಿನಲ್ಲಿ ಹೇಳಿರುವ ಬ್ರಹ್ಮದ ಜ್ಞಾನವು ಉಂಟಾದ ಮೇಲೆ

ಮೋಕ್ಷಕ್ಕಾಗಿ ಜ್ಞಾನಿಯು ಏನೇನೂ ಮಾಡತಕ್ಕದ್ದಿಲ್ಲವೆಂದೂ ಉಪನಿಷತ್ತಿನಿಂದ ಆಗುವ ಸರಿಯಾದ ಅರಿವೇ ಬ್ರಹ್ಮದ ಜ್ಞಾನವೆಂದೂ ಅದು ಹುಟ್ಟಿದೊಡನೆಯೇ ಎಲ್ಲಾ ವಿಧವಾದ ಅಜ್ಞಾನವೂ ಹುಟ್ಟಡಗಿ ಹೋಗುವದೆಂದೂ ಭಗವತ್ಪಾದರವರು ಸೂತ್ರಭಾಷ್ಯದಲ್ಲಿಯೂ ಬೃಹದಾರಣ್ಯಕಭಾಷ್ಯದಲ್ಲಿಯೂ ತಿಳಿಸಿರುತ್ತಾರೆ. ಉಪದೇಶಸಾಹಸ್ರಿಯ ಪದ್ಯಬಂಧದಲ್ಲಿಯೂ ಕೊನೆಯ ಪ್ರಕರಣದಲ್ಲಿ ಇದನ್ನು ಬಿಚ್ಚಿ ಹೇಳಿರುತ್ತಾರೆ. ಆದ್ದರಿಂದ ವೇದಾಂತಶಾಸ್ತ್ರೋಕ್ತವಾದ ಜ್ಞಾನವು ಇನ್ನೂ ಉಂಟಾಗದೆ ಇರುವ ಮುಮುಕ್ಷುಗಳಿಗಾಗಿಯೇ ಈ ಧ್ಯಾನವನ್ನು ಹೇಳಿದೆ ಎಂದು ತಿಳಿಯಬೇಕು.

ಇಲ್ಲಿ ಪರಿಸಂಖ್ಯಾನವೆಂದರೆ ಮೂರ್ತಿಧ್ಯಾನವೇ ಮುಂತಾದದ್ದರಂತೆ ಬರಿಯ ಭಾವನೆಯನ್ನು ಮಾಡುವದಲ್ಲ; ತತ್ತ್ವಸ್ವರೂಪವನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಳ್ಳುವದೇ ಪರಿಸಂಖ್ಯಾನವು. ಇಲ್ಲಿ ಯಾರಿಗಾದರೂ ಒಂದು ಶಂಕೆ ಬರಬಹುದು: ಒಮ್ಮೆ ಆತ್ಮನನ್ನು ತಿಳಿದ ಮೇಲೆ ಪೂರ ತಿಳಿದುಕೊಂಡಂತೆಯೇ ಆಗಬೇಕಲ್ಲವೆ? ಆತ್ಮನಲ್ಲಿ ಬೇರೆ ಬೇರೆ ಭಾಗಗಳಿದ್ದರೆ, ಒಂದು ಭಾಗವನ್ನು ಅರಿತುಕೊಂಡ ಮೇಲೂ ಅರಿತುಕೊಳ್ಳದೆ ಇರುವ ಬೇರೆ ಭಾಗಗಳು ಉಳಿದುಕೊಳ್ಳುವವೆಂದು ಹೇಳಬಹುದಾಗಿತ್ತು; ಆತ್ಮನು ನಿರಂಶನಾಗಿದ್ದಾನೆ. ಹೀಗಿರುವಲ್ಲಿ ಮತ್ತೆ ಮತ್ತೆ ಆತ್ಮನನ್ನು ತಿಳಿದುಕೊಳ್ಳುವದೆಂದರೇನರ್ಥ? ಈ ಶಂಕೆಗೆ ಸಮಾಧಾನವು ಇಷ್ಟೆ: ಆತ್ಮನಲ್ಲಿ ಅಂಶಗಳಿಲ್ಲವೆಂಬುದು ನಿಜವೇ; ಆದರೆ ಅಜ್ಞಾನದಿಂದ ಆತ್ಮನಲ್ಲಿ ಎಷ್ಟೋ ಸುಳ್ಳುರೂಪಗಳು ಕಲ್ಪಿತವಾಗಿರುತ್ತವೆ. ನಿಜವಾದ ಸ್ವರೂಪವನ್ನು ತಿಳಿದುಕೊಳ್ಳುವದಕ್ಕೆ ಪ್ರಯತ್ನಪಟ್ಟಾಗ ಆಯಾ ಯುಕ್ತ್ಯನುಭವಗಳಿಂದ ಆಯಾ ಆರೋಪಿತಾಂಶಗಳು ತೊಲಗುತ್ತವೆ. ಇದನ್ನು ತಿಳಿಸುವದಕ್ಕಾಗಿಯೇ ಈ ಮೊದಲನೆಯ ಖಂಡದಲ್ಲಿ ಅವಿದ್ಯೆಯಿಂದ ಬಂಧವಾಗಿರುವ ಬಗೆಯನ್ನು ಸಂಕ್ಷೇಪವಾಗಿ ತಿಳಿಸಿರುತ್ತದೆ.

ಅವಿದ್ಯೆಯಿಂದ, ಎಂದರೆ ಆತ್ಮಸ್ವರೂಪವನ್ನು ಸರಿಯಾಗಿ ತಿಳಿದು

ಕೊಳ್ಳದೆ ಅದರಲ್ಲಿ ಮಿಥ್ಯಾರೂಪವಾದ ಅನಾತ್ಮವಸ್ತುವನ್ನೂ ಅದರ ಧರ್ಮಗಳನ್ನೂ ಹುಟ್ಟುಗಟ್ಟಿಕೊಳ್ಳುವದರಿಂದ ರಾಗದ್ವೇಷಗಳೆಂಬ **ದೋಷಗಳು** ಮನುಷ್ಯನಲ್ಲಿ ಉಂಟಾಗುತ್ತವೆ. ಹೇಗೆಂದರೆ ಅವಿದ್ಯೆಯಿಂದ ತಾನು ಕರ್ತೃವೆಂದೂ ಭೋಕ್ತೃವೆಂದೂ- ಇದನ್ನು ಮಾಡಿ ಇದನ್ನು ಪಡೆದುಕೊಳ್ಳುವೆನು, ಇದನ್ನು ಮಾಡಿ ಇದನ್ನು ತಪ್ಪಿಸಿಕೊಳ್ಳುವೆನು- ಎಂದೂ ಇಂಥಿಂಥ ವಸ್ತುಗಳು ಒಳ್ಳೆಯವಾದ್ದರಿಂದ ತಾನು ಸಂಪಾದಿಸಿಕೊಳ್ಳತಕ್ಕವುಗಳೆಂದೂ ಭಾವಿಸಿಕೊಳ್ಳುತ್ತಾನೆ. ಸಂಪಾದಿಸಿಕೊಳ್ಳಬೇಕಾದ ವಿಷಯಗಳಲ್ಲಿ ರಾಗವೂ ಪರಿಹರಿಸಿಕೊಳ್ಳಬೇಕಾದ ವಿಷಯಗಳಲ್ಲಿ ದ್ವೇಷವೂ ಉಂಟಾಗುತ್ತವೆ. ಈ ರಾಗದ್ವೇಷಗಳಿಂದಲೇ ಲೋಭ, ಮೋಹ, ಮದ, ಮಾತ್ಸರ್ಯ- ಮುಂತಾದವೂ ಉಂಟಾಗುವದರಿಂದ ಬುಡದಲ್ಲಿ ನೋಡಿದರೆ ದೋಷಗಳು ರಾಗ, ದ್ವೇಷ- ಎಂಬ ಎರಡೇ ಎಂದು ಹೇಳಬಹುದಾಗಿದೆ. ಈ ದೋಷಗಳಿಂದ ಮನಸ್ಸಿನಲ್ಲಿಯೂ ವಾಕ್ಕಿನಲ್ಲಿಯೂ ಶರೀರದಲ್ಲಿಯೂ **ಪ್ರವೃತ್ತಿ**ಯುಂಟಾಗುವದು. ಇಲ್ಲಿ **ಪ್ರವೃತ್ತಿ**ಯೆಂದರೆ ಬೇಕಾದದ್ದನ್ನು ಪಡೆಯುವವದಕ್ಕೂ ಬೇಡವಾದದ್ದನ್ನು ತಪ್ಪಿಸಿಕೊಳ್ಳುವದಕ್ಕೂ ಹಾತುವರಿಯುವದೆಂದರ್ಥವು. ಹಿಂಸೆ, ಕಳವು, ವ್ಯಭಿಚಾರ, ಸುಳ್ಳು, ಕಠಿನೋಕ್ತಿ, ಚಾಡಿ, ದ್ರೋಹ, ನಾಸ್ತಿಕ್ಯ- ಮುಂತಾದ ಪಾಪಕರ್ಮಗಳಲ್ಲಿಯೂ ದಾನ, ಕಷ್ಟದಲ್ಲಿರುವವರನ್ನು ಕಾಪಾಡುವದು, ದೊಡ್ಡವರ ಸೇವೆ, ಸತ್ಯಹಿತಪ್ರಿಯವಾದ ಮಾತನ್ನಾಡುವದು, ಅಧ್ಯಯನ, ದಯೆ, ವೈರಾಗ್ಯ, ಶ್ರದ್ಧೆ– ಮುಂತಾದ ಪುಣ್ಯಕರ್ಮಗಳಲ್ಲಿಯೂ ಮನೋವಾಕ್ಕಾಯಗಳು ಮುಂದುವರಿಯುವವೆಂಬ ಪ್ರವೃತ್ತಿಗೆಲ್ಲ ರಾಗದ್ವೇಷಗಳೇ ಕಾರಣವಾಗಿರುವವು. ಈ ಪ್ರವೃತ್ತಿಯಿಂದ ಮನುಷ್ಯನು ಮಾಡುವ ಕರ್ಮಗಳ ಫಲವು ಮೂರುತೆರನಾಗಿರುವದು. ಹೇಗೆಂದರೆ, ಪುಣ್ಯಕರ್ಮಗಳಿಂದ ದೇವತೆಗಳೇ ಮುಂತಾದ ಮೇಲ್ತರದ ಜೀವದ ಜನ್ಮಗಳು ದೊರೆಯುವವು, ಪಾಪಕರ್ಮಗಳಿಂದ ಮರಗಿಡಗಳ ಮತ್ತು ಮೂಗುಪ್ರಾಣಿಗಳ ಕೀಳ್ತರದ ಜನ್ಮವುಂಟಾಗುವದು. ಮಿಶ್ರಕರ್ಮಗಳಿಂದ ನಡುತರದ

ಮನುಷ್ಯಜನ್ಮವು ಸಿಕ್ಕುವದು. ಆಯಾ ಜನ್ಮಗಳಲ್ಲಿ ತಾನು ಮಾಡಿರುವ ಕರ್ಮಗಳಿಗೆ ಅನುಗುಣವಾಗಿ ಸುಖದುಃಖಗಳನ್ನು ಪಡೆಯುತ್ತಿರುವನು. ಅಂತು ಅಜ್ಞಾನದಿಂದ ದೋಷ, ದೋಷದಿಂದ ಪ್ರವೃತ್ತಿ, ಪ್ರವೃತ್ತಿಯಿಂದ ಆಯಾ ಜನ್ಮ, ಜನ್ಮಗಳಿಂದ ಸುಖದುಃಖಗಳ ಏರುಪೇರುಗಳು- ಹೀಗೆ ಒಂದರ ಹಿಂದೆ ಒಂದು ಉಂಟಾಗುತ್ತಿರುವದರಿಂದ ಈ ಸಂಸಾರದ ತೊಳಲಿಗೆಲ್ಲ ಅಜ್ಞಾನವೇ ಮೂಲಕಾರಣವಾಯಿತಷ್ಟೆ. ಈ ಕಾರಣದಿಂದ ಸಂಸಾರದ ದುಃಖದಿಂದ ಪಾರಾಗಬೇಕೆನ್ನುವವರು ಮೂಲಕಾರಣವಾದ ಅಜ್ಞಾನವನ್ನು ಕಡಿದುಹಾಕುವದಕ್ಕೆ ಪ್ರಯತ್ನ ಮಾಡಬೇಕೆಂದು ಇದರಿಂದ ತಾನೇ ಏರ್ಪಡುತ್ತದೆ. ಇದಕ್ಕಾಗಿಯೇ ಇಲ್ಲಿ ಪರಿಸಂಖ್ಯಾನವನ್ನು ಹೇಳಿರುವದು.

## ವಿಷಯವಿಷಯಿಗಳ ವಿಂಗಡ

೨. ಇಲ್ಲಿ ಶ್ರೋತ್ರವೇ ಮುಂತಾದ ಇಂದ್ರಿಯಗಳಿಂದ ಅರಿಯಲ್ಪಡುತ್ತಿರುವದರಿಂದ ವಿಷಯಗಳೆನಿಸಿರುವ ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಇವುಗಳಿಗೆ ತಮ್ಮ ತಮ್ಮ ವಿಷಯದಲ್ಲಾಗಲಿ ತಮಗಿಂತ ಬೇರೆಯಾದ ಪದಾರ್ಥಗಳ ವಿಷಯಗಳಲ್ಲಾಗಲಿ ಜ್ಞಾನವುಂಟಾಗುವಂತಿಲ್ಲ. ಇವುಗಳೇ ಶರೀರಾದಿರೂಪದಿಂದ ಪರಿಣಾಮವನ್ನು ಹೊಂದುವದರಿಂದ, ಹೇಗೆ ಮಣ್ಣಿನ ಹೆಂಟೆಯೇ ಮುಂತಾದವುಗಳಿಗೆ (ತಮ್ಮ ವಿಷಯದಲ್ಲಾಗಲಿ ಬೇರೆ ವಸ್ತುಗಳ ವಿಷಯದಲ್ಲಾಗಲಿ ಜ್ಞಾನವುಂಟಾಗುವದಿಲ್ಲವೋ ಅದರಂತೆ ಈ ಶರೀರಾದಿಗಳಿಗೂ ತಮ್ಮ ವಿಷಯದಲ್ಲಾಗಲಿ ಬೇರೊಂದು ವಸ್ತುವಿನ ವಿಷಯದಲ್ಲಾಗಲಿ ಜ್ಞಾನವುಂಟಾಗಲಾರದು.)

(ಈ ವಿಷಯಗಳು) ಶ್ರೋತ್ರವೇ ಮುಂತಾದ (ಕರಣಗಳ) ಮೂಲಕ ಅರಿಯಲ್ಪಡುತ್ತವೆಯಷ್ಟೆ; ಹಾಗೆ ಯಾವಾತನಿಂದ

ಅರಿಯಲ್ಪಡುತ್ತಿವೆಯೋ ಆತನು ಅರಿಯುವಾತನಾದ ಕಾರಣ (ಅರಿಯಲ್ಪಡುವ) ಇವುಗಳ ಜಾತಿಗೆ ಸೇರಿದವನಲ್ಲ. ಹೇಗೆಂದರೆ, ಈ ಶಬ್ದವೇ ಮುಂತಾದವುಗಳು ಒಂದಕ್ಕೊಂದು ಸೇರಿಕೊಂಡಿರುವದರಿಂದ ಹುಟ್ಟುವದು, ಬೆಳೆಯುವದು, ಮಾರ್ಪಡುವದು, ಸೊರಗುವದು, ನಾಶವಾಗುವದು, ಮತ್ತೊಂದರೊಡನೆ ಸೇರಿಕೊಳ್ಳುವದು, (ಆಮೇಲೆ) ಅದನ್ನಗಲುವದು, ತೋರಿಕೊಳ್ಳುವದು, ಮರೆಯಾಗುವದು, ವಿಕಾರವಿಕಾರಿಭಾವವನ್ನು ಪಡೆಯುವದು, ಕ್ಷೇತ್ರಬೀಜಭಾವವನ್ನು ಪಡೆಯುವದು- ಮುಂತಾದ ಅನೇಕ ಧರ್ಮಗಳುಳ್ಳವಾಗಿಯೂ ಸಾಮಾನ್ಯವಾಗಿ ಸುಖ, ದುಃಖ- ಮುಂತಾದ ಅನೇಕ ಫಲಗಳನ್ನು ಕೊಡುತ್ತಿರುವವಾಗಿಯೂ ಇರುತ್ತವೆ. ಇವುಗಳನ್ನು ಅರಿಯುತ್ತಿರುವ (ಆತ್ಮನಾದರೋ) ಇವುಗಳನ್ನು ಅರಿಯುವವನೆಂಬ ಕಾರಣದಿಂದಲೇ ಈ ಶಬ್ದವೇ ಮುಂತಾದ ಯಾವ ಧರ್ಮವೂ ಇಲ್ಲದವನಾಗಿ ಬೇರೆ ಸ್ವಭಾವವುಳ್ಳವನಾಗಿರುತ್ತಾನೆ.

**[ 'ವಿಷಯಗಳೆನಿಸಿರುವ'- ಅರಿವಿಗೆ ಗೋಚರವಾಗಿರುವದರಿಂದ ವಿಷಯಗಳೆಂಬ ಹೆಸರನ್ನು ಪಡೆದಿರುವ. 'ಇವುಗಳ ಜಾತಿಗೆ ಸೇರಿದವನಲ್ಲ'- ವಿಷಯನಲ್ಲ, ಯಾವಾಗಲೂ ಅರಿಯುವ ವಿಷಯಿಯು. 'ವಿಕಾರವಿಕಾರಿಭಾವ'- ತಾನು ಒಂದೇ ಎಂದೂ ಮಾರ್ಪಾಡುಗಳನ್ನುಳ್ಳದ್ದೆಂದೂ ತೋರಿಕೊಳ್ಳುವದು. 'ಕ್ಷೇತ್ರಬೀಜಭಾವ'- ಒಂದು ವಿಕಾರವುಳ್ಳ ವಸ್ತು ಮತ್ತೊಂದಕ್ಕೆ ಆಶ್ರಯವಾಗಿ ತೋರಿಕೊಳ್ಳುವದು.]**

ಇಲ್ಲಿ ಉಪಯೋಗಿಸಿರುವ ಯುಕ್ತಿಗೆ ವಿಷಯವಿಷಯಿವಿಭಾಗವೆಂದು ಹೆಸರಿಡಬಹುದು. ವಿಷಯಿಯಾದ ಆತ್ಮನಿಗೆ ವಿಷಯಗಳಾದ ಮನಸ್ಸು, ಇಂದ್ರಿಯ, ದೇಹ, ಹೊರಗಣ ಶಬ್ದಾದಿಗಳು- ಇವುಗಳಲ್ಲಿ ಯಾವದೊಂದರ ಧರ್ಮವೂ ಅಂಟಲಾರದೆಂಬುದು ಈ ಯುಕ್ತಿಯ ಫಲವು. ಇಂದ್ರಿಯಗಳೂ ಮನಸ್ಸೂ ಭೂತಗಳ ಪರಿಣಾಮವೇ ಎಂಬುದನ್ನೂ

ಇಂದ್ರಿಯಾದಿಗಳೆಲ್ಲವೂ ಒಂದಕ್ಕೊಂದು ಸೇರಿಕೊಂಡು ಆತ್ಮನಿಗಾಗಿ ಕೆಲಸಮಾಡುವ ಜಡವಸ್ತುಗಳೆಂಬುದನ್ನೂ ಆತ್ಮನು ಇವುಗಳಲ್ಲಿ ಯಾವ ದರೊಡನೆಯೂ ಬೆರೆತುಕೊಳ್ಳದೆ ಅವುಗಳ ಯಾವ ಧರ್ಮಕ್ಕೂ ತನ್ನಲ್ಲೆಡೆ ಗೊಡದೆ ಇರುವ ಶುದ್ಧಚೈತನ್ಯಸ್ವರೂಪನಾಗಿರುವನೆಂಬುದನ್ನೂ ಹಿಂದಿನ ಎರಡು ಪ್ರಕರಣಗಳಲ್ಲಿ ಅಲ್ಲಲ್ಲಿ ವಿಸ್ತಾರವಾಗಿ ವಿವರಿಸಿಯೇ ಇರುತ್ತದೆ. ಅದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು. ವಿಷಯಗಳಲ್ಲಿ ಕೆಲವು ವಿಕಾರಗಳಾಗಿಯೂ ಮತ್ತೆ ಕೆಲವು ಆ ವಿಕಾರಗಳನ್ನುಳ್ಳವಾಗಿಯೂ ತೋರಿಕೊಳ್ಳುವವು; ಕೆಲವು ಆಶ್ರಯಗಳಾಗಿಯೂ ಮತ್ತೆ ಕೆಲವು ಅವುಗಳನ್ನು ಆಶ್ರಯಿಸಿರುವಂತೆಯೂ ಕಾಣಬರುವವು. ಹೀಗೆ ಬಗೆ ಬಗೆಯ ಸಂಬಂಧವುಳ್ಳವಾಗಿ ಕಂಡುಬಂದ ಮಾತ್ರದಿಂದ ಕೆಲವನ್ನು ಹೊರಗಣ ವಿಷಯಗಳೆಂದೂ ಮತ್ತೆ ಕೆಲವನ್ನು ಆತ್ಮನ ಧರ್ಮಗಳೆಂದೂ ಎಣಿಸಿ ಮೋಸಹೋಗಬಾರದು; ವಿಷಯಗಳೆಲ್ಲವೂ ಅವು ಹೇಗಿದ್ದರೂ ವಿಷಯಗಳೇ, ಅನಾತ್ಮಗಳೇ, ಬೇರೆ ಎಂಬುದನ್ನು ಮರೆಯದಿರಬೇಕು.

ಮನಸ್ಸೂ ಇಂದ್ರಿಯಗಳೂ ಹೊರಗಿನ ವಿಷಯಗಳಂತೆಯೇ ತಾವೂ ವಿಷಯಗಳಾಗಿರುವದು ಅವುಗಳನ್ನು ವಿಷಯಿಯಾದ ಆತ್ಮನೆಂದು ತಿಳಿಯಬಾರದೆಂಬುದಕ್ಕೆ ಒಂದು ಕಾರಣವಷ್ಟೆ? ಇವುಗಳು ಹೊರಗಿನ ವಿಷಯಗಳನ್ನು ಅರಿಯುವದಕ್ಕೆ ಕರಣವಾಗಿವೆಯೆಂಬದು ಮತ್ತೊಂದು ಕಾರಣವು. ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಮನಸ್ಸಿಗೆ ತಂದು ಕೊಡುವವು, ಮನಸ್ಸು ಈ ವಿಷಯಗಳಿಂದಾದ ತನ್ನ ವೃತ್ತಿಗಳನ್ನು ಆತ್ಮನಿಗೆ ಒಪ್ಪಿಸುವದು. ಆಮೇಲೆ ಜೀವನು 'ಇಂಥ ಹಣ್ಣನ್ನು ಕಂಡು ಕೈಯಿಂದ ತೆಗೆದುಕೊಂಡು ತಿಂದೆನು, ಇದು ಸವಿಯಾಗಿದೆ' ಎಂದು ಮುಂತಾಗಿ ಭಾವಿಸುತ್ತಾನೆ. ಹೀಗೆ ಮನಸ್ಸೂ ಇಂದ್ರಿಯಗಳೂ ಹೊರವಿಷಯಗಳ ಚಿತ್ರವನ್ನು ಆತ್ಮನಿಗೊಪ್ಪಿಸುವ ಕೆಲಸದಿಂದಲೇ ತೃಪ್ತವಾಗುವವೇ ಹೊರತು ತಾವೇನೂ ಹೊಸದಾಗಿ ಅರಿವನ್ನು ಮಾಡುವದಿಲ್ಲ. ಅರಿವೆಂಬ ಫಲವು ಹೇಗಾಗುವದೆಂಬುದನ್ನು ಹಿಂದಿನ ಪ್ರಕರಣದಲ್ಲಿ ಬಹುಕಡೆಗಳಲ್ಲಿ ವಿವರಿಸಿರುತ್ತದೆ. ಅಂತು ಕೊಡಲಿಯೇ ಮುಂತಾ

ದವುಗಳು ಕಡಿವುದೆಂಬ ಕ್ರಿಯೆಗೆ ಕರಣವಾಗಿರುವಂತೆಯೇ ಮನಸ್ಸೂ ಇಂದ್ರಿಯಗಳೂ ಅರಿವುದೆಂಬ ಕ್ರಿಯೆಗೆ ಕರಣಗಳೆಂದಾಯಿತಷ್ಟೆ ? ಹೀಗೆ ಇಂದ್ರಿಯಗಳನ್ನೂ ಮನಸ್ಸನ್ನೂ ಕರಣಗಳೆಂದು ಭಾವಿಸುವ ದೃಷ್ಟಿಯಿಂದ ನೋಡಿದಾಗಲೂ ಅವು ಅರಿಯುವಾತನಾದ ಆತ್ಮನ ಗುಂಪಿಗೆ ಸೇರಲಾರವೆಂಬುದು ಸ್ಪಷ್ಟವೇ ಆಗಿದೆ. ಹೇಗೆ ಕಡಿಯುವ ಕೊಡಲಿ ಮುಂತಾದವುಗಳು ಕಡಿಯುವಾತನೇ ಆಗಲಾರವೋ ಅದರಂತೆ ಮನಸ್ಸೂ ಇಂದ್ರಿಯಗಳೂ ಅರಿಯುವದಕ್ಕೆ ಕರಣಗಳಾದ್ದರಿಂದ ಅವುಗಳೇ ಅರಿಯುತ್ತವೆಂದಾಗಲಿ ಅವುಗಳಲ್ಲಿ ಅರಿವು ಇದೆಯೆಂದಾಗಲಿ ತಿಳಿಯುವದು ತಪ್ಪೆಂಬುದು ಒಟ್ಟರ್ಥವು.

"ಅರಿಯಲ್ಪಡುವ ರೂಪವು ಜಡವಾಗಿರುವಂತೆ ರೂಪವನ್ನರಿಯುವ ಚಕ್ಷುರಿಂದ್ರಿಯವೂ ಜಡವಾಗಿರುವದರಿಂದ ಜಡವಾಗಿರುವ ಇಂದ್ರಿಯಾದಿಗಳನ್ನು ಅರಿಯುವ ಆತ್ಮನ ಸ್ವರೂಪವೂ ಜಡವಾಗಿಯೇ ಏತಕ್ಕೆ ಇರಬಾರದು ? ಅದರಲ್ಲಿ ಅರಿವೆಂಬ ಧರ್ಮವೂ ನಡುವೆ ಬಂದು ಸೇರತಕ್ಕದ್ದೆಂದೇ ಏತಕ್ಕೆ ಭಾವಿಸಬಾರದು ?" ಎಂಬ ಶಂಕೆಯು ಕೆಲವರಿಗೆ ಬರಬಹುದು. ಆದರೆ ಇದು ಸರಿಯಾದ ಶಂಕೆಯಲ್ಲ ; ಏಕೆಂದರೆ ಇಂದ್ರಿಯಾದಿಗಳು ಕರಣವಾಗಿವೆ. ಕರಣವು ಜಡವಾಗಿದ್ದರೆ ಕರ್ತೃವೂ ಜಡವಾಗಿರಬೇಕೆಂದು ಕಲ್ಪಿಸುವದಕ್ಕೆ ಯಾವ ಆಧಾರವೂ ಇಲ್ಲ. ಅರಿವು ನಡುವೆ ಬಂದದ್ದೆಂದು ತಿಳಿಯುವದಕ್ಕೂ ಬೇರೊಂದು ಅರಿವು ಬೇಕಾಗುವದರಿಂದಲೂ ಅರಿಯುವಾತನ ಅರಿವಿನ ಸ್ವರೂಪವನ್ನು ಇಲ್ಲವೆಂದು ಊಹಿಸುವದೂ ಆಗುವ ಹಾಗಿಲ್ಲವಾದ್ದರಿಂದಲೂ ಮನಸ್ಸು, ಇಂದ್ರಿಯ, ವಿಷಯ- ಇವುಗಳೆಲ್ಲವೂ ಯಾವಾತನ ಸ್ವರೂಪಕ್ಕೆ ವಿಷಯವಾಗಿರುವವೋ ಅವನು ನಿತ್ಯಚೈತನ್ಯಸ್ವರೂಪನೆಂದು ತಿಳಿಯುವದೇ ಯುಕ್ತವಾಗಿರುವದು. ಆತ್ಮನು ಕೂಟಸ್ಥನಾಗಿರುವನೆಂದೂ ನಿತ್ಯಚೈತನ್ಯಸ್ವರೂಪನಾಗಿರುವನೆಂದೂ ಹಿಂದಿನ ಪ್ರಕರಣದಲ್ಲಿ ವಿಸ್ತಾರವಾಗಿ ತೋರಿಸಿಕೊಟ್ಟಿರುವದರಿಂದ ಆ ವಿಷಯವನ್ನು ಇಲ್ಲಿ ಮತ್ತೆ ವಿವರಿಸಬೇಕಾದ ಆವಶ್ಯಕತೆಯೇನೂ ಇರುವದಿಲ್ಲ. ಇಲ್ಲಿ ತಿಳಿದುಕೊಳ್ಳಬೇಕಾಗಿ

ರುವದು ಇಷ್ಟೆ: ಯಾವಾಗಲೂ ವಿಷಯಿಯಾಗಿ ಚೈತನ್ಯಸ್ವರೂಪನಾಗಿ ರುವ ಆತ್ಮನನ್ನು ಯಾವಾಗಲೂ ವಿಷಯವಾಗಿರುವ ಮನಸ್ಸು, ಇಂದ್ರಿಯ, ಬಾಹ್ಯವಿಷಯ- ಇವುಗಳ ಧರ್ಮಗಳು ಯಾವವೂ ಎಂದಿಗೂ ಒಂದಿಷ್ಟೂ ಸೋಂಕಲರಿಯವು.

## ಪರಿಸಂಖ್ಯಾನವನ್ನು ಹೇಗೆ ಮಾಡಬೇಕು ?

೩. ಹೀಗಿರುವದರಿಂದ ಶಬ್ದವೇ ಮುಂತಾದವುಗಳ ಅನು ಭವದಿಂದ ತೊಂದರೆಯಾಗುವಾಗ ವಿವೇಕಿಯಾದವನು ಈ ರೀತಿ ಯಾಗಿ ಚಿಂತಿಸಿಕೊಳ್ಳಬೇಕು:—

" ಶಬ್ದವು ಸಾಮಾನ್ಯವಾದ ಧ್ವನಿಯ ರೂಪದಿಂದಲೇ ಆಗಲಿ, ಷಡ್ಜವೇ ಮುಂತಾದ ಇಂಪಿನ (ಶಬ್ದಗಳು) ಹೊಗಳಿ ಕೆಯೇ ಮುಂತಾದ ಇಷ್ಟವಾದ (ಶಬ್ದಗಳು) ಸುಳ್ಳು(ಮಾತು) ಅಸಹ್ಯವಾದ (ಮಾತು) ತಿರಸ್ಕಾರದ (ಮಾತು) ಸಿಟ್ಟಿನ ಮಾತು ಎಂಬ ಅನಿಷ್ಟವಾದ (ಶಬ್ದಗಳು)- ಎಂಬ ವಿಶೇಷರೂಪ ಗಳಿಂದಲೇ ಆಗಲಿ, ಅರಿಯುವ ಸ್ವಭಾವವುಳ್ಳವನಾಗಿಯೂ ಒಂದರ ಸಂಬಂಧವೂ ಇಲ್ಲದವನಾಗಿಯೂ ಯಾವ ವಿಕಾರವೂ ಇಲ್ಲ ದವನಾಗಿಯೂ ಚಲನೆಯಿಲ್ಲದವನಾಗಿಯೂ ನಾಶವಿಲ್ಲದವನಾ ಗಿಯೂ ಹೆದರಿಕೆಯಿಲ್ಲದವನಾಗಿಯೂ ಅತ್ಯಂತಸೂಕ್ಷ್ಮನಾಗಿಯೂ ಯಾವದಕ್ಕೂ ವಿಷಯವಲ್ಲದವನಾಗಿಯೂ ಇರುವ ನನ್ನನ್ನು ವಿಷ ಯೀಕರಿಸಿ ಮುಟ್ಟಲಾರದು. ನಾನು ಯಾವದರ ಸಂಬಂಧವಿಲ್ಲ ದವನೆಂಬುವೇ ಇದಕ್ಕೆ ಕಾರಣವು. ಆದ್ದರಿಂದಲೇ (ನನಗೆ) ಶಬ್ದ ದಿಂದ ಹಾನಿಯಾಗಲಿ ವೃದ್ಧಿಯಾಗಲಿ ಆಗುವಂತಿಲ್ಲ. ಹೀಗಿರು ವದರಿಂದ ಹೊಗಳುವದು ಮುಂತಾದ ಪ್ರಿಯರೂಪವಾದ ಅಥವಾ

ಹೀಯಾಳಿಸುವದೇ ಮುಂತಾದ ಅಪ್ರಿಯರೂಪವಾದ ಶಬ್ದವು ನನ್ನನ್ನು ಏನು ಮಾಡೀತು ? ಶಬ್ದವೇ ತಾನೆಂದು ತಿಳಿದುಕೊಂಡಿರುವ ಅವಿವೇಕಿಯನ್ನು ಮಾತ್ರ ಪ್ರಿಯವಾದ ಶಬ್ದವು ಹಿಗ್ಗಿಸೀತು, ಮತ್ತು ಅಪ್ರಿಯವಾದ (ಶಬ್ದವು) ಕುಗ್ಗಿಸೀತು ; ಏಕೆಂದರೆ ಅವನು ವಿವೇಕವಿಲ್ಲದವನಾಗಿರುತ್ತಾನೆ. ಆದರೆ ವಿವೇಕಿಯಾದ ನನಗೆ ಇದು ಕೂದಲೆಳೆಯಷ್ಟೂ ಏನೂ ಮಾಡಲಾರದು.

['ವಿವೇಕಿಯಾದವನು'- ಶ್ರವಣಮನನಗಳನ್ನು ಮಾಡಿ ಏನಾದರೂ ಅಡ್ಡಿಯಿಂದ ತತ್ತ್ವವನ್ನು ಮನಗಾಣದೆ ಇರುವವನು; ತತ್ತ್ವವನ್ನರಿತವನಲ್ಲ. 'ಷಡ್ಜವೇ ಮುಂತಾದವು'- ಇವು ಅವ್ಯಕ್ತಶಬ್ದಗಳು, ಹೊಗಳಿಕೆಯೇ ಮುಂತಾದವು ವ್ಯಕ್ತಶಬ್ದಗಳು; ಇವುಗಳೆರಡೂ ಶಬ್ದವೇ ಹೊರತು ಬೇರೆಯಲ್ಲ. 'ಅತ್ಯಂತಸೂಕ್ಷ್ಮನಾಗಿಯೂ' ಎಲ್ಲರಿಗಿಂತಲೂ ಸೂಕ್ಷ್ಮನಾಗಿಯೂ ; ಇಂದ್ರಿಯಗಳಿಗಿಂತ ಮನಸ್ಸು ಸೂಕ್ಷ್ಮ, ಮನಸ್ಸಿಗಿಂತ ಬುದ್ಧಿ ಸೂಕ್ಷ್ಮ ; ಬುದ್ಧಿಗಿಂತಲೂ ಆತ್ಮನು ಸೂಕ್ಷ್ಮ; ಇಲ್ಲಿ ಸೂಕ್ಷ್ಮವೆಂದರೆ ಇಂದ್ರಿಯಗೋಚರವಲ್ಲದ್ದು. 'ಶಬ್ದವೇ ತಾನೆಂದು ತಿಳಿದಿರುವ'- ಶಬ್ದದ ಪರಿಣಾಮವಾಗಿರುವ ಶ್ರೋತ್ರೇಂದ್ರಿಯದ ಧರ್ಮವನ್ನು ತನ್ನ ಮೇಲೆ ಹಾಕಿಕೊಂಡು 'ಇದು ಇಂಪಾದ ಶಬ್ದವು, ಇದು ಹಿತವಾಗಿರುವದು', 'ಇದು ಕರ್ಕಶವಾಗಿದೆ, ಇದನ್ನು ಕೇಳಿದರೆ ನನಗೆ ಸಿಟ್ಟು ಬರುತ್ತದೆ' ಎಂದು ಮುಂತಾಗಿ ಭಾವಿಸುವ.]

" ಇದರಂತೆ ಸ್ಪರ್ಶದ ಸಾಮಾನ್ಯರೂಪದಿಂದಲೇ ಆಗಲಿ, ಶೀತ, ಉಷ್ಣ, ಮೆದು, ಗಟ್ಟಿ-ಮುಂತಾದ ಅಥವಾ ಜ್ವರ, ಹೊಟ್ಟೆನೋವು ಮುಂತಾದ ಅದರ ವಿಶೇಷರೂಪಗಳಿಂದಲಾಗಲಿ- ಅವು ಅಪ್ರಿಯವಾಗಿಯೇ ಇರಲಿ, ಪ್ರಿಯವಾಗಿಯೇ ಇರಲಿ, ಶರೀರದಲ್ಲಿಯೇ ಇದ್ದುಕೊಂಡಿರುವವಾಗಿರಲಿ, ಹೊರಗಿನ ಯಾವದಾದರೊಂದು ನಿಮಿತ್ತದಿಂದ ಬಂದವುಗಳೇ ಆಗಲಿ- ಮುಷ್ಟಿಯಿಂದ ಗುದ್ದುವದೇ ಮುಂತಾದದ್ದರಿಂದ ಆಕಾಶಕ್ಕೆ ಏನೇನೂ ಆಗದಿರುವಂತೆ ಅವುಗಳಿಂದ ನನಗೇನೂ ಹೆಚ್ಚು ಅಥವಾ ಕುಂದು ಎಂಬ

ವಿಕಾರವು ಆಗಲಾರದು. ಏಕೆಂದರೆ ನಾನು ಸ್ಪರ್ಶವಿಲ್ಲದವನಾಗಿರುತ್ತೇನೆ.

[' ಶರೀರದಲ್ಲಿಯೇ ಇದ್ದುಕೊಂಡಿರುವವು '- ಜ್ವರ ಮುಂತಾದವು. ' ಹೊರಗಿನ ಯಾವದಾದರೂ ಒಂದು ನಿಮಿತ್ತದಿಂದ ಬಂದವುಗಳು '- ಮೆದು, ಗಟ್ಟಿ, ಮುಂತಾದವು. 'ಸ್ಪರ್ಶವಿಲ್ಲದವನು'- ಸ್ಪರ್ಶರೂಪನೂ ಅಲ್ಲ, ಸ್ಪರ್ಶದ ಸಂಬಂಧವಿರುವವನೂ ಅಲ್ಲ. ]

" ಹೀಗೆಯೇ ರೂಪದ ಸಾಮಾನ್ಯದಿಂದಲೇ ಆಗಲಿ ಸ್ತ್ರೀಯರ ಆಕಾರವೇ ಮುಂತಾದ ಪ್ರಿಯ ಅಥವಾ ಅಪ್ರಿಯವಾದ ಅದರ ವಿಶೇಷಗಳಿಂದಲೇ ಆಗಲಿ ನನಗೆ ಯಾವ ಬಗೆಯ ಹಾನಿಯಾಗಲಿ ವೃದ್ಧಿಯಾಗಲಿ ಆಗಲಾರದು. ಏಕೆಂದರೆ ನಾನು ರೂಪವಿಲ್ಲದವನಾಗಿರುತ್ತೇನೆ.

" ಮತ್ತು ರಸದ ಸಾಮಾನ್ಯದಿಂದಲೇ ಆಗಲಿ, ಬೇಕಾದದ್ದು ಅಥವಾ ಬೇಡವಾದದ್ದೆಂದು ಮೂಢಬುದ್ಧಿಯುಳ್ಳವರು ಗ್ರಹಿಸುವ ಸಿಹಿ, ಹುಳಿ, ಉಪ್ಪು, ಕಾರ, ಕಹಿ, ಒಗರು- ಎಂಬ ಅದರ ವಿಶೇಷಗಳಿಂದಲೇ ಆಗಲಿ, ರಸಸ್ವರೂಪನಲ್ಲದ ನನಗೆ ಯಾವ ವಿಧವಾದ ಹೆಚ್ಚಾಗಲಿ ಕುಂದಾಗಲಿ ಉಂಟಾಗಲಾರದು.

" ಇದರಂತೆಯೇ ಗಂಧದ ಸಾಮಾನ್ಯರೂಪದಿಂದಲೇ ಆಗಲಿ ಬೇಕಾದ ಅಥವಾ ಬೇಡವಾದ ಹೂ, ಗಂಧ-ಮುಂತಾದವುಗಳೆಂಬ ಅದರ ವಿಶೇಷಗಳಿಂದಲೇ ಆಗಲಿ ಗಂಧಸ್ವರೂಪನಲ್ಲದ ನನಗೆ ಯಾವ ಬಗೆಯ ಹೆಚ್ಚಾಗಲಿ ಕುಂದಾಗಲಿ ಉಂಟಾಗಲಾರದು. 'ಯಾವ (ಆತ್ಮತತ್ತ್ವ) ವಲ್ಲಿ ಶಬ್ದವಿಲ್ಲವೋ, ಸ್ಪರ್ಶವಿಲ್ಲವೋ, ರೂಪವಿಲ್ಲವೋ, ಯಾವದು ನಾಶವಿಲ್ಲದ್ದೋ, ಮತ್ತು ಯಾವದರಲ್ಲಿ ಸವಿಯಿಲ್ಲವೋ, ಮತ್ತು ಯಾವದು ಎಂದೆಂದಿಗೂ ಗಂಧವಿಲ್ಲದ್ದಾಗಿರುವದೋ (ಅದನ್ನು ತಿಳಿದುಕೊಂಡರೆ ಮೃತ್ಯುವಿನ

ಮುಖದಿಂದ ಬಿಡುಗಡೆಹೊಂದುತ್ತಾನೆ)' ಎಂಬ (ಕ. ೧-೩-೧೫) ಶ್ರುತಿಯು ಇದಕ್ಕೆ ಪ್ರಮಾಣವು.

——

ಹಿಂದಿನ ಪ್ರಕರಣದಲ್ಲಿ ತಿಳಿಸಿರುವ ವಿಚಾರಗಳನ್ನು ವ್ಯವಹಾರದಲ್ಲಿ ಸಾಧಕನು ನೆನಪಿಗೆ ತಂದುಕೊಳ್ಳಬೇಕಾದ ಬಗೆಯನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸಿರುತ್ತದೆ. ಶಬ್ದಸ್ಪರ್ಶರೂಪರಸಗಂಧಾದಿಗಳು ಎಷ್ಟೇ ವಿಶೇಷಾಕಾರಗಳಲ್ಲಿ ತೋರಿಕೊಳ್ಳಲಿ, ಅವುಗಳೆಲ್ಲ ತಮ್ಮ ಮೂಲರೂಪವಾದ ಶಬ್ದಾದಿಗಳಲ್ಲಿಯೇ ಅಡಕವಾಗಿರುತ್ತವೆ; ಈ ಶಬ್ದಾದಿಗಳಿಂದ ಹೆಚ್ಚಾಗಲಿ ಕುಂದಾಗಲಿ ಆಗಬೇಕಾದರೆ ಶಬ್ದಾದಿಗಳ ರೂಪಾಂತರವೇ ಆಗಿರುವ ಇಂದ್ರಿಯಮನಸ್ಸುಗಳಲ್ಲಾಗಬಹುದೇ ಹೊರತು, ಇವುಗಳೆಲ್ಲವನ್ನೂ ಅರಿಯುತ್ತಿರುವ ಸಾಕ್ಷಿಚೈತನ್ಯದಲ್ಲಿ ಎಂದಿಗೂ ಆಗಲಾರದು. ಅಂಥ ಸಾಕ್ಷಿಚೈತನ್ಯನಾಗಿರುವ ನನ್ನಲ್ಲಿ ಯಾವ ಏರುಪೇರನ್ನೂ ಅವು ಮಾಡಲರಿಯವು- ಎಂದು ಚಿಂತಿಸಿಕೊಳ್ಳುವದರಿಂದ ಶಬ್ದಾದಿಗಳಲ್ಲಿ ಬೇಕು ಬೇಡವೆಂಬ ಬುದ್ಧಿಯಾಗಲಿ ಬೇಕಾದದ್ದು ಬಂದರೆ ಹಿಗ್ಗು, ಅಥವಾ ಬೇಡವಾದದ್ದು ಬಂದರೆ ತಗ್ಗು- ಹೀಗೆ ಮನಸ್ಸಿನಲ್ಲಿ ಹೆಚ್ಚುಕಡಿಮೆಗಳಾಗಲಿ ಆಗುವದಿಲ್ಲ.

೪. "ಇಮೂ ಅಲ್ಲದೆ ಹೊರಗೆ ಶಬ್ದವೇ ಮುಂತಾದವು ಇವೆಯಷ್ಟೆ; ಅವುಗಳೇ ಶರೀರದ ಆಕಾರವಾಗಿಯೂ ಅವುಗಳನ್ನು ಗ್ರಹಿಸುವ ಶ್ರೋತ್ರವೇ ಮುಂತಾದ ಇಂದ್ರಿಯಗಳ ಆಕಾರವಾಗಿಯೂ (ಮನಸ್ಸು ಬುದ್ಧಿಯೆಂಬ) ಎರಡು ಅಂತಃಕರಣಗಳ ಆಕಾರವಾಗಿಯೂ ಅವುಗಳ ವಿಷಯಗಳ ಆಕಾರವಾಗಿಯೂ ಇರುತ್ತವೆ. ಏಕೆಂದರೆ ಇವುಗಳು ಒಂದಕ್ಕೊಂದು ಸೇರಿಕೊಂಡೇ ಇರುತ್ತವೆ, ಎಲ್ಲಾ ಕ್ರಿಯೆಗಳಲ್ಲಿಯೂ ಒಟ್ಟುಗೂಡಿಯೇ ಇರುತ್ತವೆ.

“ಹೀಗಿರುವದರಿಂದ ಪರಮಾರ್ಥವನ್ನು ಬಲ್ಲ ನನಗೆ ಶತ್ರುವಾಗಲಿ ಮಿತ್ರನಾಗಲಿ ಉದಾಸೀನನಾಗಲಿ ಯಾವನೂ ಇರುವದಿಲ್ಲ. ಹೀಗಿರುವಲ್ಲಿ ಯಾವನಾದರೂ ಮಿಥ್ಯಾಜ್ಞಾನದಿಂದುಂಟಾದ ಅಭಿಮಾನದಿಂದ ಪ್ರಿಯವನ್ನೋ ಅಪ್ರಿಯವನ್ನೋ ಕ್ರಿಯಾಫಲರೂಪವಾಗಿ ನನ್ನಲ್ಲಿ ಪ್ರಯೋಗಮಾಡಿದರೆ ಆತನು ಹಾಗೆ ಪ್ರಯೋಗಮಾಡುವದು ವ್ಯರ್ಥವೇ ಆಗುವದು ; ಏಕೆಂದರೆ ನಾನು ಅದಕ್ಕೆ ವಿಷಯನಾಗಿರುವದಿಲ್ಲ. ‘ಈ (ಆತ್ಮನು) ಅವ್ಯಕ್ತನು, ಇವನು ಅಚಿಂತ್ಯನು’ (ಗೀ. ೨–೨೫) ಎಂಬ ಸ್ಮೃತಿಯು ಈ ವಿಷಯದಲ್ಲಿ ಪ್ರಮಾಣವು.

“ಹೀಗೆಯೇ ಪಂಚಭೂತಗಳು ಯಾವವುಗಳಿಂದಲೂ ನಾನು ವಿಕಾರವನ್ನು ಪಡೆಯತಕ್ಕವನಲ್ಲ; ಏಕೆಂದರೆ (ನಾನು ಅವುಗಳಿಗೆ) ವಿಷಯನಲ್ಲ. ‘ಈ ಆತ್ಮನು ಕತ್ತರಿಸುವದಕ್ಕೆ ಆಗುವವನಲ್ಲ, ಇವನು ಸುಡುವದಕ್ಕೆ ಆಗುವವನಲ್ಲ’ (ಗೀ. ೨–೨೪) ಎಂದು (ಮುಂತಾಗಿರುವ) ಸ್ಮೃತಿಯು ಇದಕ್ಕೆ ಆಧಾರವು.

[‘ಅವ್ಯಕ್ತನು’– ಇಂದ್ರಿಯಗಳಿಗೆ ಗೋಚರನಲ್ಲ. ‘ಅಚಿಂತ್ಯನು’– ಮನಸ್ಸಿಗೆ ಸಿಗುವವನಲ್ಲ. ]

ಶರೀರವೂ ಇಂದ್ರಿಯಗಳೂ ಮನಸ್ಸೂ ವಿಷಯಗಳೆಂಬುದನ್ನೂ ಅವುಗಳು ಒಂದಕ್ಕೊಂದು ಸೇರಿಕೊಂಡೇ ಆತ್ಮನಿಗಾಗಿ ಕೆಲಸಮಾಡುತ್ತಿವೆಯಾದ್ದರಿಂದ ಇವುಗಳೆಲ್ಲ ಜಡವೇ ಎಂಬುದನ್ನೂ ಹಿಂದಿನ ಪ್ರಕರಣಗಳಲ್ಲಿ ವಿವರಿಸಿದೆ. ಅದನ್ನು ಮತ್ತೊಮ್ಮೆ ಮನಸ್ಸಿಗೆ ತಂದುಕೊಳ್ಳಬೇಕು. ವಿಷಯಗಳಿಂದ ಆತ್ಮನಿಗೆ ಯಾವ ಹಾನಿಯೂ ವೃದ್ಧಿಯೂ ಆಗುವ ಹಾಗಿಲ್ಲವೆಂಬುದು ಆದರಿಂದ ವ್ಯಕ್ತವಾಗುತ್ತದೆ.

‘ಇವನಿಗೆ ಇಂಥ ವಿಷಯಗಳ ಸಂಬಂಧದಿಂದ ಒಳ್ಳೆಯದು ಅಥವಾ ಕೆಟ್ಟದ್ದು ಆಗುವದು, ಆದರಿಂದ ಇವನಿಗೆ ಸುಖವು ಅಥವಾ

ದುಃಖವು ಉಂಟಾಗುವದು '— ಎಂದು ಅವಿವೇಕಿಯು ಭಾವಿಸುತ್ತಾನೆ. ಉದಾಹರಣೆಗೆ, 'ಒಳ್ಳೆಯ ಮಾತುಗಳನ್ನಾಡಿ, ಅರ್ಘ್ಯಪಾದ್ಯಾಚಮನ ಗಳಿಂದ ಆತಿಥ್ಯವನ್ನು ಮಾಡಿ, ಊಟ ಉಪಚಾರ ಮುಂತಾದವುಗಳನ್ನು ಒದಗಿಸಿ, ಮೆತ್ತನೆಯ ಸುಪ್ಪತ್ತಿಗೆಯ ಮೇಲೆ ಮಲಗಿಸಿದರೆ ಇವನಿಗೆ ಸುಖವಾಗುವದು, ಆದರಿಂದ ನನಗೆ ಇಂಥಿಂಥ ಲಾಭವಾಗುವದು'-ಎಂದು ಯೋಚಿಸಿಕೊಂಡು ಆಯಾ ವಿಷಯಗಳನ್ನು ತನಗೆ ಬೇಕಾದವನ ಹತ್ತಿರಕ್ಕೆ ತರುತ್ತಾನೆ. ಇದರಂತೆ 'ಕೆಟ್ಟ ಮಾತುಗಳನ್ನಾಡಿ, ಕದನ್ನ ವನ್ನು ನೀಡಿ, ಅನಾದರಣೆಯಿಂದ, ದನದ ಕೊಟ್ಟಿಗೆಯಲ್ಲಿ ಕಲ್ಲಿನ ಮೇಲೆ ಮಲಗಿಸಿದರೆ ಇವನಿಗೆ ದುಃಖವಾಗುವದು; ಆದರಿಂದ ಇವನ ಮೇಲಿನ ಸೇಡು ತೀರಿದಂತಾಗುವದು'— ಎಂದು ಬಗೆದು ಆಯಾ ದುಷ್ಟವಿಷಯ ಗಳನ್ನು ತನಗೆ ಬೇಡವಾದವನ ಮೇಲೆ ಪ್ರಯೋಗಿಸುತ್ತಾನೆ. ಇದು ಪ್ರಯೋಗಿಸುವವನ ಅಜ್ಞಾನದೃಷ್ಟಿಯಿಂದ ನೋಡಿದಾಗ ಸರಿಯೆನಿಸ ಬಹುದಾದರೂ ಪರಮಾರ್ಥದೃಷ್ಟಿಯುಳ್ಳ ಜ್ಞಾನಿಗಳ ಸರಿಯಾದ ದೃಷ್ಟಿಯಿಂದ ನೋಡಿದರೆ ವಿಷಯಗಳಾಗಲಿ, ವಿಷಯಗಳ ಪ್ರಯೋಗ ವೆಂಬ ಕ್ರಿಯೆಯಾಗಲಿ ಅದರಿಂದಾಗುವ ಫಲವಾಗಲಿ ಆತ್ಮನಿಗೆ ಅಂಟು ವದೇ ಇಲ್ಲ.

ತಾವು ಇವನಿಗೆ ಶತ್ರುಗಳೆಂದು ಅಥವಾ ಮಿತ್ರರೆಂದು ಭಾವಿಸಿ ಕೊಂಡು ಅವನಿಗೆ ಉಪಕಾರವಾಗಲೆಂದು ಅಥವಾ ಅಪಕಾರವಾಗಲೆಂದು ಮೇಲೆ ಹೇಳಿದಂತೆ ಮಾಡುವ ವಿಷಯಪ್ರಯೋಗಗಳಿಂದ ಆಗುವ ಸುಖದುಃಖಗಳು ನಿಜವಾಗಿ ತನಗೆ ಅಂಟುವದಿಲ್ಲವೆಂದು ಮುಮುಕ್ಷು ವಾದವನು ಚಿಂತಿಸುತ್ತಿರಬೇಕೆಂದು ತಿಳಿಸಿದಂತಾಯಿತಷ್ಟೆ. ಇದರಂತೆ ಅಚೇತನವಸ್ತುಗಳಿಂದಾಗುವ ಸುಖದುಃಖಗಳಿಗೂ ತಾನು ವಿಷಯ ನಲ್ಲವೆಂಬುದನ್ನೂ ಯೋಚಿಸಿಕೊಳ್ಳುತ್ತಿರಬೇಕು. ಆತ್ಮಸ್ವರೂಪನಾಗಿ ರುವ ತನ್ನಲ್ಲಿ ಶಬ್ದಾದಿಗಳಿಲ್ಲದಿರುವದು, ತಾನು ಇತರೊಡನೆಯೂ ಕೂಡಿಕೊಳ್ಳದೆ ಇರುವದು, ತಾನು ಯಾವದಕ್ಕೂ ವಿಷಯನಲ್ಲದಿರು ವದು-ಇವೇ ತನಗೆ ಹೊರಗಿನ ಸುಖದುಃಖಗಳು ಅಂಟಲಾರವೆಂಬುದಕ್ಕೆ

ಮುಖ್ಯಕಾರಣಗಳಾಗಿರುತ್ತವೆ. ಆದ್ದರಿಂದ ಈ ಆತ್ಮಧರ್ಮಗಳನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಳ್ಳುತ್ತಿರಬೇಕು.

೫. "ಶರೀರೇಂದ್ರಿಯಗಳ ಆಕಾರಮಾತ್ರವನ್ನು ಕಂಡು ನನ್ನಲ್ಲಿ ಪ್ರೇಮವಿರುವವರೂ ಇಲ್ಲದಿರುವವರೂ ನನಗೆ ಒಳ್ಳೆಯದು, ಕೆಟ್ಟದ್ದು- ಮುಂತಾದದ್ದನ್ನು ಮಾಡಬೇಕೆಂದು ಬಯಸುವದೂ ಅದರಿಂದಾಗುವ ಪುಣ್ಯಾಪುಣ್ಯಗಳ ಪ್ರಾಪ್ತಿಯೂ ಅವರಿಗೇ ಆಗುವವೇ ಹೊರತು ಮುಪ್ಪಿಲ್ಲದವನೂ ಮರಣವಿಲ್ಲದವನೂ ಭಯವಿಲ್ಲದವನೂ (ಬೃ. ೪-೪-೨೫) ಆಗಿರುವ ನನಗಾಗುವದಿಲ್ಲ; (ಪಾಪವನ್ನು) ಮಾಡಿದ್ದು (ಪುಣ್ಯವನ್ನು) ಮಾಡದೆ ಇದ್ದದ್ದು- ಇವು 'ಇವನನ್ನು ಸಂಕಟಗೊಳಿಸುವದಿಲ್ಲ' (ಬೃ. ೪-೪-೨೨), 'ಇವನು ಕರ್ಮದಿಂದ ಬೆಳೆಯುವದೂ ಇಲ್ಲ, ಬಡವಾಗುವದೂ ಇಲ್ಲ', (ಬೃ. ೪-೪-೨೩) 'ಒಳಗೂ ಹೊರಗೂ ಇರುವವನು, ಜನ್ಮರಹಿತನಾಗಿರುವವನು' (ಮು. ೨-೧-೨), "ಲೋಕದುಃಖಕ್ಕೆ ಹೊರಗಾಗಿರುವ (ಆತನಿಗೆ ಅದು) ಅಂಟುವದಿಲ್ಲ" (ಕ.೨-೨-೧೫)- ಇವೇ ಮುಂತಾದ ಶ್ರುತಿಸ್ಮೃತಿಗಳು ಈ ವಿಷಯವನ್ನು ತಿಳಿಸುವವು.

["ಮುಪ್ಪಿಲ್ಲದವನೂ...." ಇದು ಬೃಹದಾರಣ್ಯಕಶ್ರುತಿಯ ತಾತ್ಪರ್ಯ, ಅಕ್ಷರಾರ್ಥವಲ್ಲ. ಶರೀರದಲ್ಲಿದ್ದರೂ 'ಆತನು ಮಾಡುವದೂ ಇಲ್ಲ, ಕರ್ಮವು ಅವನಿಗೆ ಅಂಟುವದೂ ಇಲ್ಲ' (ಗೀ.೧೩-೩೧) ಮುಂತಾದ ಸ್ಮೃತಿಗಳನ್ನು ಇಲ್ಲಿ ಅನ್ವಯಿಸಿಕೊಳ್ಳಬೇಕು.]

ವಿಷಯದಲ್ಲಿ ಅಭಿಮಾನವಿರುವವನಿಗೇ ಧರ್ಮಾಧರ್ಮಗಳು ಆಗುವವು; ಆದ್ದರಿಂದ ಯಾರು ಅಭಿಮಾನದಿಂದ ಒಳ್ಳೆಯದನ್ನು ಅಥವಾ ಕೆಟ್ಟದ್ದನ್ನು ಮಾಡುವದಕ್ಕೆ ಹೊರಟಿರುವರೋ ಅವರಿಗೇ ಆಯಾ ಕರ್ಮದ ಫಲವೇ ಹೊರತು ನನಗೇನೂ ಅಲ್ಲ ಎಂದು ಭಾವಿಸಿಕೊಳ್ಳಬೇಕು.

## ಅದ್ವಿತೀಯಾತ್ಮಧ್ಯಾನ

೬. ಅನಾತ್ಮವಸ್ತುವು ನಿಜವಾಗಿ ಇಲ್ಲದೆ ಇರುವದರಿಂದ (ನನಗೆ ಎರಡನೆಯ ವಸ್ತುವಿನಿಂದ ಯಾವ ಹಾನಿಯಾಗಲಿ ವೃದ್ಧಿಯಾಗಲೀ ಆಗಲಾರದು) ಎಂಬುದು ಮುಖ್ಯವಾದ ಕಾರಣವು. ಹೀಗೆ ದ್ವೈತವು ಇಲ್ಲದೆ ಇರುವದರಿಂದ ಆತ್ಮನು ಅದ್ವಿತೀಯನು ಎಂಬುದನ್ನು ತಿಳಿಸುವ ಉಪನಿಷದ್ವಾಕ್ಯಗಳು ಯಾವವು ಇರುವವೋ (ಅವುಗಳನ್ನು) ವಿಸ್ತಾರವಾಗಿ ಚೆನ್ನಾಗಿ ನೋಡುತ್ತಿರಬೇಕು, ಚೆನ್ನಾಗಿ ನೋಡುತ್ತಿರಬೇಕು.

---

ಶಬ್ದವೇ ಮುಂತಾದವುಗಳು ಜ್ಞಾನಕ್ಕೆ ವಿಷಯವಾಗಿರುವವೆಂಬುದನ್ನು ಇಟ್ಟುಕೊಂಡು ಆತ್ಮನಿಗೆ ಅವುಗಳಿಂದ ಏನೂ ಏರುಪೇರು ಆಗಲಾರದೆಂದು ಇದುವರೆಗೆ ಹೇಳಲಾಯಿತು. ಆತ್ಮನು ಅದ್ವಿತೀಯನು, ಎಂದರೆ ಆತ್ಮನಿಗಿಂತ ಬೇರೆಯಾಗಿರುವ ಎರಡನೆಯ ವಸ್ತುವೇ ಇಲ್ಲವೆಂಬ ಪ್ರಬಲವಾದ ಯುಕ್ತಿಯನ್ನು ಈ ಖಂಡದಲ್ಲಿ ಹೇಳಿರುತ್ತದೆ.

ಅನಾತ್ಮವಸ್ತುವಿಲ್ಲವೆಂದರೆ ಅದು ತೋರುವದೇ ಇಲ್ಲವೆಂದು ಅರ್ಥವಲ್ಲ. ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಮೂರು ಅವಸ್ಥೆಗಳಿಗೂ ಸಾಕ್ಷಿಯಾಗಿರುವ ಆತ್ಮಚೈತನ್ಯಕ್ಕೆ ಸಮನಾದ ಇರವು ಅನಾತ್ಮಕ್ಕೆ ಎಂದಿಗೂ ಬರಲಾರದು. ಎಚ್ಚರ ಕನಸುಗಳೆಂಬ ಆಯಾ ಅವಸ್ಥೆಯಲ್ಲಿ ಮಾತ್ರವೇ ತೋರಿಕೊಳ್ಳುವ ಅದರ ಇರವು ಕೀಳುತರಗತಿಗೆ ಸೇರತಕ್ಕದ್ದು. ನೀರಿನಲ್ಲಿ ಅಥವಾ ಕನ್ನಡಿಯಲ್ಲಿ ತೋರುವ ಮನುಷ್ಯನ ನೆರಳು ಹೇಗೆ ಅವನಿಗೆ ಎರಡನೆಯದೆನಿಸುವದೋ ಅದರಂತೆ ಪರಮಾರ್ಥ ಸತ್ಯರೂಪನಾದ ಆತ್ಮನಿಗೆ ಎರಡನೆಯದೆನಿಸುವ ಅದೇ ಬಗೆಯ ಇರವಿನ ಯಾವದೊಂದು ವಸ್ತುವೂ ಇರುವದಿಲ್ಲ. ಹೇಗೆ ಹಗ್ಗದ ಹಾವು, ಕಪ್ಪೆಯ ಚಿಪ್ಪಿನ ಬೆಳ್ಳಿ– ಮುಂತಾದ ಬರಿಯ ತೋರಿಕೆಯ ವಸ್ತುಗಳಿಂದ

ವ್ಯವಹಾರದಲ್ಲಿ ಜನರಿಗೆ ನಿಜವಾಗಿ ಯಾವ ಹಾನಿವೃದ್ಧಿಗಳೂ ಆಗುವದಿಲ್ಲವೋ ಅದರಂತೆ ಪರಮಾತ್ಮಸ್ವರೂಪನಾಗಿರುವ ತನಗೆ ಮಿಥ್ಯಾರೂಪವಾದ- ಎಂದರೆ ಕಡಿಮೆಯು ಇರವಿಸ- ಅನಾತ್ಮದಿಂದ ಯಾವ ಹಾನಿವೃದ್ಧಿಗಳೂ ಆಗುವ ಹಾಗಿಲ್ಲವೆಂದು ಚಿಂತಿಸುತ್ತಿರಬೇಕು. ಆತ್ಮನು ಅದ್ವಿತೀಯನೆಂಬುದಕ್ಕೆ ಸಾಧಕವಾಗಿ ಒಂದನೆಯ ಪ್ರಕರಣದಲ್ಲಿ ಹೇಳಿದಂಥ ಉಪನಿಷದ್ವಾಕ್ಯಗಳನ್ನು ವಿಚಾರಿಸುವದೂ ಜ್ಞಾನದಾರ್ಢ್ಯಕ್ಕೆ ಸಹಾಯವಾಗುವದು.

# ಮೂರನೆಯ ಪ್ರಕರಣದ ಸಾರ

[ಅಂಕೆಗಳು ಮೂಲದಲ್ಲಿರುವ ಖಂಡಗಳ ಸಂಖ್ಯೆಯನ್ನು ಸೂಚಿಸುವವು.]

೧. ಅವಿದ್ಯೆಯಿಂದ ರಾಗದ್ವೇಷಾದಿದೋಷಗಳೂ ಇವುಗಳಿಂದ ಪ್ರವೃತ್ತಿಯೂ ಪ್ರವೃತ್ತಿಯಿಂದ ಸಂಸಾರದ ಅನುಭವವೂ ಆಗಿರುವವು. ಆದ್ದರಿಂದ ನಿಜವಾದ ತತ್ತ್ವವನ್ನು ಯಾವಾಗಲೂ ಅನುಸಂಧಾನಮಾಡು ತ್ತಿರುವದು ಅವಿದ್ಯೆಯ ಪರಿಹಾರದ ಮೂಲಕ ಸಂಸಾರದ ಅನರ್ಥವನ್ನು ಪರಿಹರಿಸಿಕೊಳ್ಳುವದಕ್ಕೆ ಉತ್ತಮವಾದ ಉಪಾಯವು.

೨-೫. ಪ್ರಪಂಚವೆಲ್ಲ ಶಬ್ದಸ್ಪರ್ಶರೂಪರಸಗಂಧಗಳ ಬಗೆಬಗೆಯ ಮಾರ್ಪಾಡಾಗಿರುತ್ತದೆ. ಈ ವಿಷಯಗಳು ಒಂದಕ್ಕೊಂದು ಸೇರಿ ಕೊಂಡು ಚೇತನರೂಪನಾದ ಆತ್ಮನಿಗಾಗಿ ಇದ್ದುಕೊಂಡಿರುತ್ತವೆ. ಇವುಗಳೆಲ್ಲವನ್ನೂ ನೋಡುತ್ತಿರುವ ಶುದ್ಧನಾದ ಅಸಂಗನಾದ ಆತ್ಮನೇ ನಾನು- ಎಂದು ಚಿಂತಿಸುವದರಿಂದ ಅನಾತ್ಮಕೃತವಾದ ದುಃಖಗಳೆಲ್ಲವೂ ಪರಿಹಾರವಾಗುವವು.

೬. ಅನಾತ್ಮವಸ್ತುವು ಆತ್ಮನಿಗಿಂತ ಬೇರೆಯಾಗಿದೆಯೆಂಬುದೂ ಪರಮಾರ್ಥವಲ್ಲ. ಆತ್ಮಾನಾತ್ಮವಿವೇಕವನ್ನು ಮಾಡಿಕೊಳ್ಳುವದರಿಂದಲೇ ದುಃಖಗಳು ಸ್ವಲ್ಪಮಟ್ಟಿಗೆ ಪರಿಹಾರವಾಗುವವಾದರೂ ದುಃಖಕ್ಕೆ ಕಾರಣವಾದ ಅನಾತ್ಮವು ನಿಜವಾಗಿ ಇಲ್ಲವೇ ಇಲ್ಲವೆಂದೂ ತಾನು ಅದ್ವಿತೀಯನಾದ ಸಚ್ಚಿದಾನಂದಸ್ವರೂಪನೆಂದೂ ಅವಸ್ಥಾತ್ರಯವಿಚಾರ ದಿಂದ ತಿಳಿದರೆ ಅನಾತ್ಮದಿಂದಾಗುವ ದುಃಖವು ಹಿಂದೆಯೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ ಇರುವದಿಲ್ಲ- ಎಂಬ ಉತ್ತಮವಾದ ಮನೋಧೈರ್ಯವುಂಟಾಗುವದು. ಆದ್ದರಿಂದ ಈ ಉಪನಿಷತ್ಸಿದ್ಧಾಂತ ವನ್ನು ವಿಸ್ತಾರವಾಗಿ ವಿಚಾರಮಾಡುತ್ತಿರುವದೇ ಎಲ್ಲಕ್ಕೂ ಹೆಚ್ಚಿನ ಪರಿಸಂಖ್ಯಾನವು.

# ಪ್ರಮಾಣವಚನಗಳ ಗ್ರಂಥಾನುಕ್ರಮ

ವಚನಗಳನ್ನು ನೇರಾಗಿ ಉದಾಹರಿಸದೆ ಅರ್ಥದಿಂದ ಸೂಚಿಸಿರುವ ವಾಕ್ಯಗಳನ್ನೂ ಇಲ್ಲಿ ಸೇರಿಸಿದೆ, ಇಲ್ಲಿ ಕಂಸದಲ್ಲಿ ಕೊಟ್ಟಿರುವ ಸಂಖ್ಯೆಗಳು ಆಯಾ ಗ್ರಂಥದ ಅಧ್ಯಾಯಾದಿಗಳನ್ನು ಸೂಚಿಸುವವು ; ಮುಂದೆ ಹಾಗೆಯೇ ಹಾಕಿರುವ ಸಂಖ್ಯೆಗಳು ಈ ಪುಸ್ತಕದ ಪುಟವನ್ನು ಸೂಚಿಸುವವು. ಗ್ರಂಥದ ಅಧ್ಯಾಯವೇ ಮುಂತಾದವುಗಳ ಸಂಖ್ಯೆಗಳು ಪುಸ್ತಕದ ಒಳಗಡೆಯಲ್ಲಿ ಕೆಲವು ಕಡೆ ತಪ್ಪಾಗಿ ಅಚ್ಚಾಗಿವೆ ; ಇಲ್ಲಿರುವಂತೆ ತಿದ್ದಿಕೊಳ್ಳಬೇಕಾಗಿ ಪ್ರಾರ್ಥನೆ.

### ಆಪಸ್ತಂಬಧರ್ಮಸೂತ್ರ:—



### ಈಶಾವಾಸ್ಯೋಪನಿಷತ್ತು:—



### ಐತರೇಯೋಪನಿಷತ್ತು:—



### ಕಠೋಪನಿಷತ್ತು:—

### ಕೇನೋಪನಿಷತ್ತು:—



### ಕೌಶೀತಕ್ಯುಪನಿಷತ್ತು:—



### ಛಾಂದೋಗ್ಯೋಪನಿಷತ್ತು:—

## ತೈತ್ತಿರೀಯೋಪನಿಷತ್ತು:—



## ತೈತ್ತಿರೀಯಾರಣ್ಯಕ:—



## ಪ್ರಶ್ನೋಪನಿಷತ್ತು:—



## ಬೃಹದಾರಣ್ಯಕೋಪನಿಷತ್ತು:—

## ಭಗವದ್ಗೀತೆ:—

---

# ಅಕ್ಷರಾನುಕ್ರಮಣಿಕೆ

## (ಹೆಚ್ಚಿಗೆಯ ವಿಚಾರಗಳನ್ನೂ ಒಳಕೊಂಡಿದೆ)

ಸೂಚನೆ:— ಈ ಅನುಕ್ರಮಣಿಕೆಯಲ್ಲಿ ಒಂದು ಮಾತಿನ ಮುಂದೆ ಹೆಚ್ಚಾದ ಶಬ್ದಗಳಿದ್ದರೆ ಅವುಗಳೆಲ್ಲ ಒಂದೇ ಅರ್ಥದ ಪರ್ಯಾಯಶಬ್ದಗಳೆಂದೂ ಒಂದು ಶಬ್ದವು ಕಪ್ಪಕ್ಷರದಲ್ಲಿ ಅಚ್ಚಾಗಿದ್ದರೆ ಈ ಅನುಕ್ರಮಣಿಕೆಯಲ್ಲಿ ಆ ಶಬ್ದದ ವಿವರವನ್ನು ನೋಡಬೇಕೆಂದೂ ಸಂಕೇತ. ಇದರಲ್ಲಿರುವ ಸಂಖ್ಯೆಗಳು ಪುಟದ ಸಂಖ್ಯೆಗಳು.

## ಅ

## ಆ

ದೃಷ್ಟಿಯ ಅಭಿಮಾನದಿಂದ ಆಗುವ ತಪ್ಪು ತಿಳಿವುಗಳು ೭೫, ೧೨೬, ೭೧ ; ಎಚ್ಚರದ ಪ್ರಪಂಚವೆಂಬುದರ ಅರ್ಥ ೧೨೬ ; ಎಚ್ಚರಕನಸುಗಳ ಸಾಮ್ಯವು ೧೨೬, ೧೨೭ ; ಎಚ್ಚರಕನಸುಗಳನ್ನು **ಸಾಕ್ಷಿಚೈತನ್ಯ**ದ ದೃಷ್ಟಿಯಿಂದ ನೋಡಬೇಕು ೧೨೭ ; ಎಚ್ಚರಕನಸುಗಳಿಂದ ಚೈತನ್ಯದಲ್ಲಿ ಮಾರ್ಪಾಡಿಲ್ಲ ೧೨೧–೧೨೭ ; ಎಚ್ಚರಕನಸುಗಳಲ್ಲಿ ತತ್ತ್ವವು ಇಬ್ಬಗೆಯಾಗಿ ಹಿಂಗಡಿಸಿಕೊಂಡು ತೋರುವದು ೧೩೭ ; ಎಚ್ಚರದ ಮತ್ತು ಕನಸಿನ ದೇಹಾದಿಗಳು ಆಯಾ ಅವಸ್ಥೆಯಲ್ಲಿಯೇ ತೋರಿ ಹಾರುವ ಸ್ವರೂಪದವುಗಳು ೧೨೬.

## ಏ

ಏಷಣಾತ್ರಯ— ಮಕ್ಕಳುಮರಿ, ಹಣಕಾಸು, ಲೋಕಾಂತರದ ಸುಖ– ಇವುಗಳ ಬಯಕೆ. ಇವು ಮೂರೂ ಇದ್ದವರಿಗೆ ಮನಸ್ಸು ಹರಿದಾಡುತ್ತಿರುವದರಿಂದ ಜ್ಞಾನವುಂಟಾಗುವದಕ್ಕೆ ಅಡ್ಡಿಯಾಗಿರುತ್ತದೆ ೩.

## ಕ

ಕನಸು— ಎಚ್ಚರದಂತೆ ತೋರುವ ಮಿಥ್ಯಾವಸ್ಥೆ; **ಸ್ವಪ್ನ**.

ಕರ್ತೃ— ಕ್ರಿಯೆಯನ್ನು ಮಾಡುವವನು. ಜನರು ತಾವು ಸ್ವಭಾವದಿಂದಲೇ ಕರ್ತೃಗಳೆಂದು ತಿಳಿದಿರುವರು ; ಈ ಕರ್ತೃತ್ವಬುದ್ಧಿಯೇ ಕರ್ಮದಲ್ಲಿ ತೊಡಗುವದಕ್ಕೆ ಕಾರಣ ೫೮; ಜೀವನು ಕರ್ತೃವೆಂಬುದು ಕರ್ಮಕಾಂಡದ ಶ್ರುತಿಯ ತಾತ್ಪರ್ಯವಲ್ಲ ೫೬; ಆತ್ಮನಲ್ಲಿ ತೋರುವ ಕರ್ತೃತ್ವವೂ **ಭೋಕ್ತೃತ್ವ**ವೂ ಭ್ರಾಂತಿಕೃತ ೧೭೦.

ಕರಣ— ಯಾವದಾದರೊಂದು ಕ್ರಿಯೆಗೆ ಸಾಧನ. ಇಂದ್ರಿಯಗಳು ಜೀವನ ಜ್ಞಾನಕರ್ಮಗಳಿಗೆ ಬಹಿಃಕರಣ. ಮನಸ್ಸು ಅಂತಃಕರಣ; ಕರಣಗಳೂ ಭೌತಿಕವೇ ೩೧, ೧೯೧ ; ಅರಿವಿಗೆ ಕರಣಗಳಾಗಿರುವದರಿಂದ ಇಂದ್ರಿಯಗಳು ಅರಿವಿನ ಕರ್ತೃವಾದ ಆತ್ಮನಲ್ಲ ೧೮೭ ; ಜ್ಞಾನದ ಕರಣಗಳು ಹೊಸದಾಗಿ ಜ್ಞಾನವನ್ನುಂಟುಮಾಡುವದಿಲ್ಲ ೧೮೬ ; ಕರಣಗಳು ಜಡವಾಗಿದ್ದರೆ ಕರ್ತೃವೂ ಜಡವಾಗಿರಬೇಕೆಂಬುದು ಸರಿಯಲ್ಲ ೧೮೭; ಕರ್ತೃವಲ್ಲದ ಆತ್ಮನಲ್ಲಿ ಕರ್ತೃತ್ವವು ತೋರುವದೇ ಹೊರತು ಕರಣಗಳನ್ನು ತೆಗೆದುಕೊಳ್ಳುವದೆಂಬ ಕ್ರಿಯೆಯು ಯಾವದೊಂದು ಗೊತ್ತಾದ ಕಾಲದಲ್ಲಿಯೂ ಆತ್ಮನಲ್ಲಿ ನಡೆಯುವದಿಲ್ಲ ೧೬೧ ; ಪರಮಾತ್ಮನು ಜಗತ್ತನ್ನು ಸೃಷ್ಟಿಸುವದಕ್ಕೆ ಯಾವದೊಂದು ಕರಣವನ್ನೂ ಉಪಯೋಗಿಸುವದಿಲ್ಲ ೨೫.

ಕರ್ಮ—ಕೆಲಸ, ಶಾಸ್ತ್ರದಲ್ಲಿ ಮಾಡಬೇಕೆಂದು ಅಥವಾ ಮಾಡಕೂಡದೆಂದು ಹೇಳಿರುವದು. ಕರ್ಮಗಳಲ್ಲಿ **ಧರ್ಮ**ವೆಂದೂ ಅಧರ್ಮವೆಂದೂ ಎರಡು ಬಗೆ ೪ ; ಬರಿಯ ಕರ್ಮದಿಂದ ಪಿತೃಲೋಕ, ಉಪಾಸನಾಸಹಿತಕರ್ಮದಿಂದ ದೇವಲೋಕ ೪ ; ಕರ್ಮದ ಫಲವು ಅನಿತ್ಯ ೪ ; ಕರ್ಮಕ್ಕೆ ಅಭಿಮಾನವೇ ಕಾರಣ ೫೮; ಅಜ್ಞನಿಗೆ ಕರ್ಮವು ವಿಹಿತವಾಗಿದೆ ೪೧ ; ಕರ್ಮದಲ್ಲಿ ಹಿಂಗಡ, ಅದರ ಫಲ ೪, ೧೮೩; ಕರ್ಮಕ್ಕೆ ಅಧಿಕಾರಿ ೬೦; ಜ್ಞಾನವುಂಟಾದ ಮೇಲೆ ಕರ್ಮವನ್ನು ಮಾಡುವದರಿಂದಾಗಲಿ ಬಿಡುವದರಿಂದಾಗಲಿ

# ಗ

## ಚ



## ಜ

## ತ



## ದ

## ಧ



## ನ

ಕ್ಕಿಂತ ಬೇರೆಯರಿವು ಇರುವದಿಲ್ಲ ೧೩೦; ಹೊರವಸ್ತುಗಳನ್ನು ಅರಿಯುವ ಶಕ್ತಿಯೂ ನಿದ್ರೆಯಲ್ಲಿ ಅವ್ಯಕ್ತವಾಗಿದೆ ೧೩೦; ನಿದ್ರೆಯ ನೆನಪು ಮಿಕ್ಕ ನೆನಪಿನಂತಲ್ಲ ೧೩೧; ನಿದ್ರೆಯಲ್ಲಿ ಯಾವ ಸುಖದುಃಖಗಳೂ ಇರುವದಿಲ್ಲ ೧೨೩; ನಿದ್ರೆಯಲ್ಲಿ ಯಾವುದೊಂದರ ಅರಿವೂ ಆಗುವದಿಲ್ಲವೆಂಬುದರ ಅರ್ಥ ೧೩೩; ನಿದ್ರೆಯ ಪರೀಕ್ಷೆಯಿಂದ ಸಿದ್ಧವಾಗುವ ವಿಷಯಗಳು ೧೩೩.

ನಿಮಿತ್ತ—ಏನಾದರೊಂದು ಕಾರ್ಯವಾಗುವದಕ್ಕೆ ಬೇಕಾದ ಸಾಮಗ್ರಿ. ಅವಿದ್ಯೆಯೇ ಸಂಸಾರಕ್ಕೆ ನಿಮಿತ್ತ ೭೪.

ನಿರಾತ್ಮವಾದ — ಆತ್ಮನಿಲ್ಲವೆಂಬ ಚಾರ್ವಾಕರ ಮತ್ತು ಬೌದ್ಧರ ವಾದ ೯೨; ಆತ್ಮನು ದೇಹದಲ್ಲಿ ಅಧ್ಯಸ್ತನಾಗಿದಾನೆಂದರೂ ನಿರಾತ್ಮವಾದವಾಗುವದಿಲ್ಲ ೯೩.

ನಿಷಿದ್ಧ — ಶಾಸ್ತ್ರದಲ್ಲಿ ಮಾಡಬೇಡವೆಂದು ಹೇಳಿರುವ ಕರ್ಮ. ಚಿತ್ತಶುದ್ಧಿ ಬೇಕಾದವನು ಇವುಗಳನ್ನೂ ಕಾಮ್ಯಕರ್ಮಗಳನ್ನೂ ಬಿಟ್ಟು ನಿಷ್ಕಾಮಕರ್ಮವನ್ನು ಮಾಡಬೇಕು ೬೦.

ನಿಷ್ಕಾಮಕರ್ಮ—ಕರ್ಮದ ಫಲದಲ್ಲಿ ಆಸಕ್ತಿಯಿಲ್ಲದೆ ಪರಮೇಶ್ವರಾರ್ಪಣಬುದ್ಧಿಯಿಂದ ಮಾಡುವ ಕರ್ಮ. ಇದರಿಂದ ಚಿತ್ತಶುದ್ಧಿಯಾಗುವದು ೬೦.

ನೆನಪು—ಸ್ಮೃತಿ, ಸ್ಮರಣೆ, ಹಿಂದಿನ ಅನುಭವವನ್ನು ಈಗ ನೆನಸಿಕೊಳ್ಳುವದು ೧೪೮; ಅನುಭವದಿಂದುಂಟಾಗಿದ್ದ ವಾಸನೆಗಳು ಮೇಲಕ್ಕೆದ್ದರೆ ಸ್ಮರಣೆಯುಂಟಾಗುವದು ೪೬, ೧೪೮; ಆತ್ಮನಿಗೆ ಆತ್ಮನ ವಿಷಯದಲ್ಲಿ ಸ್ಮರಣೆಯುಂಟಾಗಲಾರದು ೧೪೮: ಸುಷುಪ್ತಿಯ ಮತ್ತು ಕನಸಿನ ನೆನಪು ಮಿಕ್ಕ ನೆನಪಿನಂತಲ್ಲ ೧೩೧—೧೩೩; ಸುಷುಪ್ತಿಯ ನೆನಪಿನಿಂದ ಆಗಲೂ ಸ್ವರೂಪಚೈತನ್ಯವಿತ್ತೆಂದು ಸಿದ್ಧವಾಗುವದು ೧೩೩; ಸುಷುಪ್ತಿಯ ಅನುಭವವನ್ನು ಸುಷುಪ್ತಿಯ ನೆನಪು ಬಾಧಿಸಲಾರದು ೮೩: ಸ್ಮೃತಿಯೂ ಹೊರಗಿನ ಅನುಭವ ಮತ್ತು ಅದರಿಂದಾಗುವ ಸಂಸ್ಕಾರ- ಇವುಗಳೂ ಆತ್ಮನಿಗೆ ವಿಷಯ ೪೬.

## ಪ

ಪರಮಾತ್ಮ— ಸಕಲ ಪ್ರಾಣಿಗಳಲ್ಲಿಯೂ ಇರುವ ನಿಜವಾದ ಆತ್ಮ ೨೩; ಪರಮಾತ್ಮನ ಲಕ್ಷಣವನ್ನು ತಿಳಿಸುವ ಶ್ರುತಿಸ್ಮೃತಿಗಳು ೧೩, ೧೪; ನಾಮರೂಪಗಳನ್ನು ಬಿಡಿಬಿಡಿಯಾಗಿ ಮಾಡಿ ಹೊರಗೆಡುವವನು ಪರಮಾತ್ಮನೆ ೨೨; ಪರಮಾತ್ಮನಿಗಿಂತ ಬೇರೆಯಾದ ಆತ್ಮನೇ ಪರಮಾರ್ಥವಾಗಿಲ್ಲವೆಂದು ಶ್ರುತಿ ೧೬೮; ಜೀವತ್ವವೂ ನಾಮರೂಪಪ್ರಪಂಚವೂ ಅವಿದ್ಯೆಯಿಂದ ಪರಮಾತ್ಮನಲ್ಲಿ ಕಲ್ಪಿತ ೪೧, ೭೯; ಪರಮಾತ್ಮನು ಶರೀರದೊಳಗೆ ಜೀವರೂಪದಿಂದ ಹೊಕ್ಕಿರುವನೆಂಬ ಶ್ರುತಿಯ ತಾತ್ಪರ್ಯ ೩೩; ಪರಮಾತ್ಮನಿಗೆ ಜಾತಿವಂಶಸಂಸ್ಕಾರಾದಿಗಳಿಲ್ಲ ೩೨.

ಪರಮಾರ್ಥ— ನಿಜವಾಗಿಯೂ ಇರುವದು, ಸತ್ಯ. ಪರಮಾತ್ಮನೊಬ್ಬನೇ ಪರಮಾರ್ಥ; ಇದನ್ನು ಅವಸ್ಥಾತ್ರಯವಿಚಾರದಿಂದ ಕಂಡುಕೊಳ್ಳಬಹುದು ೧೦೦.

ಪರಾರ್ಥ — ಸ್ವತಂತ್ರವಾದ ಮತ್ತೊಂದನ್ನವಲಂಬಿಸಿ ಅದರ ಪ್ರಯೋಜನ

## ಫ



## ಬ

**ಶುದ್ಧಜ್ಞಾನ**ವೆಂದೂ ಕರೆಯುವರು ೧೨೯ ; ಇದು ಎಚ್ಚರಕನಸುಗಳಲ್ಲಿರುವಂತೆ ನಿದ್ರೆಯಲ್ಲಿಯೂ ಇದ್ದೇ ಇರುವದು ೧೨೯; ಇದು **ಕೂಟಸ್ಥನಿತ್ಯ, ಅದ್ವಿತೀಯ** ೧೭೨ ; ಇದು ವಿಷಯುಗಳಂತೆ ತೆಗೆದುಕೊಳ್ಳತಕ್ಕದ್ದೂ ಅಲ್ಲ, ಬಿಡತಕ್ಕದ್ದೂ ಅಲ್ಲ ೧೭೫ ; ಪ್ರಮಾಣಪ್ರಮೇಯವ್ಯವಹಾರವೆಲ್ಲ ಇದರ ಬಲದಿಂದ ೧೭೪ : ಎಚ್ಚರಕನಸುಗಳೆಂಬ ದ್ವೈತವು ಇದರ ರೂಪದಲ್ಲಿ ಸತ್ಯ, ತನ್ನ ರೂಪದಲ್ಲಿ ಮಿಥ್ಯೆ ೧೭೪.

ಬಿಡಿಯರಿವು— ಎಚ್ಚರದಲ್ಲಿಯೂ ಕನಸಿನಲ್ಲಿಯೂ ತೋರಿಕೊಳ್ಳುವ **ವಿಶೇಷಜ್ಞಾನ**. ಇದನ್ನೇ ಅರಿವೆಂದು ಜನರು ವಾಡಿಕೆಯಾಗಿ ಕರೆಯುತ್ತಾರೆ ೧೨೯ ; ಇದರ ತಿರುಳು ಸ್ವರೂಪಚೈತನ್ಯವೇ ೧೩೦ ; ನಿದ್ರೆಯಲ್ಲಿ ಬಿಡಿಯರಿವು ಇಲ್ಲದಿರುವದರಿಂದ ಜನರು ಆಗ ಯಾವ ಅರಿವೂ ಇಲ್ಲವೆನ್ನುತ್ತಾರೆ ೧೩೩.

ಬ್ರಹ್ಮ—ಜಗತ್ತಿಗೆ ಕಾರಣವಾಗಿರುವ **ಪರಮಾತ್ಮವಸ್ತು** ೨೧.

ಬ್ರಾಹ್ಮಣ— ಬ್ರಹ್ಮಜ್ಞಾನಕ್ಕೆ ಇವನು ವಿಶೇಷಾಧಿಕಾರಿ, ಆದರೆ ವೇದಾಂತಕ್ಕೆ ಜಾತಿಯ ನಿರ್ಬಂಧವೇನೂ ಇಲ್ಲ ೪.

## ಭ

ಭಾಗವತಮತ:– ಉಪಾಸನೆಯಿಂದ ಜೀವನು ಬ್ರಹ್ಮವೇ ಆಗುತ್ತಾನೆಂಬ ಮತ ೩೮; ಇದಕ್ಕೂ ಈಗಿನ ದ್ವೈತವೇದಾಂತಿಗಳಿಗೂ ತಾರತಮ್ಯ ೩೯; ಇದು ಶ್ರುತಿವಿರುದ್ಧ ೩೯.

ಭೂತಗಳು— ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ- ಇವುಗಳು ಆತ್ಮನಿಂದಾಗಿವೆ ೨೯; ಇವುಗಳಿಂದ ಆತ್ಮನಿಗೆ ವಿಕಾರವಿಲ್ಲ ೧೯೨.

ಭೇದ— ಬೇರೆಬೇರೆಯಾಗಿರುವದು. ಪರಮಾತ್ಮನಿಗೂ ಪ್ರಪಂಚಕ್ಕೂ ಭೇದವಿಲ್ಲ, ಉತ್ಪತ್ತಿಪ್ರಲಯುಗಳನ್ನು ಹೇಳುವದರಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲ ೫೬; ಜೀವೇಶ್ವರರಿಗೆ ಭೇದವಿಲ್ಲ ೩೬; ಜೀವೇಶ್ವರಭೇದಜ್ಞಾನವನ್ನು ಶ್ರುತಿಗಳು ನಿಂದಿಸುತ್ತವೆ ೩೭; ಸಾಧ್ಯಸಾಧನಭೇದಗಳು ಸತ್ಯವೆಂಬುದರಲ್ಲಿ ಶಾಸ್ತ್ರತಾತ್ಪರ್ಯವಿಲ್ಲ ೫೬ ; ಶ್ರುತಿಯಲ್ಲಿ ಭೇದವನ್ನು ಹೇಳಿರುವ ಮಾತ್ರದಿಂದ ಭೇದವು ಸತ್ಯವಾಗಲಾರದು ೫೭.

ಭೌತಿಕ— ಪಂಚಭೂತಗಳಿಂದಾದದ್ದು; ಹೊರಗಿನ ವಿಷಯುಗಳೂ ಒಳಗಿನ ಇಂದ್ರಿಯಮನೋಬುದ್ಧಿಗಳೂ ಭೌತಿಕವೇ ೩೧, ೧೮೫

ಮಾಧ್ವರು— ದ್ವೈತವನ್ನು ಸತ್ಯವೆಂದು ಹೇಳುವ ಮಧ್ವಾಚಾರ್ಯರ ಶಿಷ್ಯರು. ಇವರ ಮತ: ಜೀವನಿಗಿಂತ ಬೇರೆಯಾಗಿ ಈಶ್ವರನು ಇದ್ದಾನೆ, ಇವನು ಜಗತ್ತಿಗೆ ನಿಮಿತ್ತಕಾರಣನು, ಅಂತರ್ಯಾಮಿಯು, ನಿಯಾಮಕನು ; ಚೇತನಾಚೇತನರೂಪವಾದ ಪ್ರಪಂಚವು ಈಶ್ವರಪರತಂತ್ರವು ೧೩೫ ; ಜೀವರು ಅನೇಕ, ದೇಹಕ್ಕಿಂತ ಭಿನ್ನರು; ರಾಗದ್ವೇಷಾದಿಗಳು ಜೀವರಿಗೆ ೫೧; ಚೈತನ್ಯವು ಜೀವಾತ್ಮನ ಸ್ವರೂಪ ಮತ್ತು ಗುಣ ; ನಾನು ಎಂಬ ಅರಿವಿಗೆ ಕರ್ತೃವೂ ಕರ್ಮವೂ ಜೀವನೇ ೧೪೯ ; ದೇಹವನ್ನು ನಾನು ಎಂದು ಕರೆಯುವದು ಗೌಣಪ್ರಯೋಗ ೮೫; ಜಗತ್ತು ಸತ್ಯವು

## ಯ



## ರ



## ಲ



## ವ

ರಸ, ಗಂಧಗಳು ೧೮೪; ಇವೇ ದೇಹೇಂದ್ರಿಯಾದಿರೂಪದಲ್ಲಿ ಪರಿಣಮಿಸಿರುವವು ೧೮೫; ಇವುಗಳಲ್ಲಿ ಚೇತನವಿಲ್ಲ, ತಮ್ಮನ್ನು ತಾವಾಗಲಿ, ಒಂದನ್ನೊಂದಾಗಲಿ ಅರಿಯಲಾರವು ೧೮೪ ; ಪ್ರತ್ಯಯಗಳಿಂದ ಇವು ಸಿದ್ಧ ೧೧೦, ೧೬೨, ೧೭೨.

ವಿಷಯ ೨.— ಅರಿವಿಗೆ ಗೋಚರವಾಗಿರುವದು. ಮನಸ್ಸು, ಇಂದ್ರಿಯ, ಪ್ರಾಣ, ದೇಹ, ಹೊರಗೆ ಕಾಣುವ ವಸ್ತುಗಳು— ಎಲ್ಲವೂ ವಿಷಯಗಳೇ ; ವಿಷಯಗಳಲ್ಲಿ ನಾನಾರೂಪಗಳುಂಟು, ವಿಷಯತ್ವವು ಮಾತ್ರ ಬೇರ್ಪಡುವದಿಲ್ಲ ೧೮೬ ; ಇವು ಪರಾರ್ಥ, ಜಡ ೧೧೫, ೧೯೨, ಇವು ಪರಮಾರ್ಥವಾಗಿ ಅಸತ್ಯ ೧೯೬.

ವಿಷಯಿ— ವಿಷಯಗಳನ್ನು ಬೆಳಗುವ ಚೈತನ್ಯರೂಪನಾದ ಆತ್ಮ. ಯಾವದೊಂದು ವಿಷಯದ ಧರ್ಮವೂ ವಿಷಯಿಯಾದ ಆತ್ಮನಿಗೆ ಅಂಟಲಾರದು ೧೮೫ ; ಎಚ್ಚರಕನಸುಗಳು ವಿಷಯವಿಷಯಿಭಾವದಿಂದಲೇ ತೋರಿಕೊಳ್ಳುವವು ೧೫೪; ವಿಷಯಗಳ ಸ್ವಭಾವದಿಂದಲಾಗಲಿ ಹೆಚ್ಚುಕಡಿಮೆಯಿಂದಲಾಗಲಿ ವಿಷಯಿಯಲ್ಲಿ ಏರುಪೇರುಗಳಿಲ್ಲ ೧೯೧ ; ವಿಷಯಿವಿಷಯವಿವೇಕದಿಂದ ಮನಸ್ಸು ಸ್ತಿಮಿತವಾಗಿ ಜ್ಞಾನವು ದೃಢವಾಗುವದು ೧೯೬.

ವೇದಾಂತಿ— ಉಪನಿಷತ್ತನ್ನು ಪ್ರಮಾಣವಾಗಿ ಒಪ್ಪುವ ಮಾಧ್ವರಾಮಾನುಜವೇದಾಂತಿಗಳೂ ತಟಸ್ಥೇಶ್ವರವಾದಿಗಳೇ.

## ಶ

ಶಕ್ತಿ— ನಾಮರೂಪಗಳ ಬೀಜವಾದ **ಅವ್ಯಾಕೃತ**. ಇದು **ಅಚಿಂತ್ಯ** ೨೫ ; ಆತ್ಮನಿಗಿಂತ ಬೇರೆಯಲ್ಲ ೨೪.

ಶಾಂಡಿಲ್ಯವಿದ್ಯೆ— ಜಗತ್ತೆಲ್ಲವೂ ಬ್ರಹ್ಮವೇ ಎಂದು ಮಾಡುವ ಉಪಾಸನೆ. ಉಪಾಸನಾವಾಕ್ಯಗಳಿಗೂ ಬ್ರಹ್ಮವು ಜಗತ್ತಿಗಿಂತ ಬೇರೆಯಾಗಿರುವದೆಂಬುದರಲ್ಲಿ ಶ್ರುತಿಯ ತಾತ್ಪರ್ಯವಿಲ್ಲವೆಂಬುದಕ್ಕೆ ಈ ಉಪಾಸನೆಯನ್ನು ವಿಧಿಸುವ ವಾಕ್ಯವು ಸಾಕ್ಷಿ ೧೭.

ಶಿಷ್ಯ— **ಅಧಿಕಾರಿ**ಯಾಗಿ ಗುರುವಿನ ಬಳಿಗೆ ತತ್ತ್ವವಿಚಾರಕ್ಕೆ ಬಂದವನು.

ಶೂನ್ಯವಾದ— ಯಾವ ಪದಾರ್ಥವೂ ಸತ್ಯವಾಗಿರುವದಿಲ್ಲವೆಂಬ ಬೌದ್ಧರ ವಾದವು ೯೩ ; ಈ ವಾದದಲ್ಲಿ ದೋಷ, ಸರ್ವಶೂನ್ಯವಾದಕ್ಕೂ **ಸರ್ವಾತ್ಮವಾದ**ಕ್ಕೂ ತಾರತಮ್ಯ ೯೩.

ಶ್ರುತಿ— ವೇದವಚನ. ಪರಮಾತ್ಮನು ಸಂಸಾರಾತೀತನೆಂದೂ ಎಲ್ಲವೂ ಆಗಿರುವನೆಂದೂ ತಿಳಿಸುವ ಶ್ರುತಿ ೧೩, ೫೦ ; ತ್ರಿವೃತ್ಕರಣದ ಶ್ರುತಿ ೩೧ ; ಪರಮಾತ್ಮನಿಗೆ ಜಾತ್ಯಾದಿಗಳಿಲ್ಲವೆಂಬುದಕ್ಕೆ ಶ್ರುತಿ ೨೦ ; ಪರಮಾತ್ಮನೇ ಜೀವರೂಪದಿಂದ ಪ್ರಪಂಚದಲ್ಲಿ ಕಾಣಿಸಿಕೊಳ್ಳುವನೆಂಬರ್ಥದ ಶ್ರುತಿ ೩೨ ; ಅಭೇದಜ್ಞಾನದಿಂದಲೇ ಮೋಕ್ಷವೆಂಬ ಮತ್ತು ಭೇದಜ್ಞಾನವನ್ನು ನಿಂದಿಸುವ ಶ್ರುತಿ ೩೪, ೩೭, ೫೨ ; ಆತ್ಮನಿಗೆ ಕರ್ಮಸಂಬಂಧವಿಲ್ಲವೆಂಬರ್ಥದ ಶ್ರುತಿ ೩೯ ; ಕರ್ಮವನ್ನು ವಿಧಿಸಿರುವ ಶ್ರುತಿಯು

# ತಿದ್ದುಪಡಿಯೂ ಸೇರಿಸಿಕೊಳ್ಳಬೇಕಾದ ವಿಷಯಗಳೂ

—o—

## ತಿದ್ದುಪಡಿ

(ಪ್ರಮಾಣವಚನಗಳ ಸ್ಥಾನಸಂಖ್ಯೆಗಳಲ್ಲಾಗಿರಬಹುದಾದ ತಪ್ಪುಗಳನ್ನು ೧೯೪ನೆಯ ಪುಟದಲ್ಲಿರುವ ಪಟ್ಟಿಯಂತೆ ತಿದ್ದಿಕೊಳ್ಳಬೇಕು.)

| ಪುಟ | ಸಾಲು | ಇರುವದು | ಇರಬೇಕಾದದ್ದು |
|---|---|---|---|
| ೨ | ೧೫ | ಶಿಷ್ಯನಾಗಿರುವ | ಶಿಷ್ಯನಾಗಿರುವ ಶುದ್ಧನಾದ |
| ೪ | ೨೫ | ತತ್ತ್ವವನ್ನು | ಎಂದಿಗೂ ತತ್ತ್ವವನ್ನು |
| ,, | ೨೬ | ಎಂದಿಗೂ ವಿಚಾರಮಾಡಲಾರನು | ವಿಚಾರಮಾಡಲಾರನು |
| ೧೪ | ೨ | ಉಪದೇಶ | ಮೊದಲು ಉಪದೇಶ |
| ೨೮ | ೧೩ | ಬೇರ್ಪಡುವಂತೆಯೇ | ಮಹಾಕಾಶವೆನಿಸುವಂತೆಯೇ |
| ,, | ೧೪ | ಇರುವದಾಗಿಯೂ | ಇರುವರಾಗಿಯೂ |
| ,, | ೧೬ | ಅನುಸರಿಸಿರುವದಾಗಿಯೂ | ಅನುಸರಿಸಿರುವರಾಗಿಯೂ |
| ೩೫ | ೮ | ಪರಮಾತ್ಮತತ್ತ್ವ | ಪರಮಾತ್ಮತ್ವ |
| ೫೨ | ೫ | ಒಳಗೂ ಹೊರಗೂ ಜನ್ಮರಹಿತನಾಗಿಯೂ | ಒಳಗೂ ಹೊರಗೂ ಇರುವವನಾಗಿಯೂ ಜನ್ಮರಹಿತನಾಗಿಯೂ |
| ,, | ೨ | ಅಲ್ಲಿ ಒಬ್ಬನು | ಅಲ್ಲಿ....ಒಬ್ಬನು |
| ೫೮ | ೪ | ನಿಂದಿಸಿರುವದೂ | ನಿಂದಿಸಿರುವದೂ* |
| ೭೮ | ೮ | ಚಿಪ್ಪನ್ನು | ಚಿಪ್ಪನ್ನು* |
| ,, | ೧೦ | ಮೋಟುಮರದಲ್ಲಿ ಮನುಷ್ಯನನ್ನು | ಮನುಷ್ಯನನ್ನು ಮೋಟುಮರದಲ್ಲಿ |

| ಪುಟ | ಸಾಲು | ಇರುವದು | ಇರಬೇಕಾದದ್ದು |
|---|---|---|---|
| ೭೮ | ೧೬ | ಸರಿಯಲ್ಲ ; | ಸರಿಯಲ್ಲ ; ಏಕೆಂದರೆ ಆತ್ಮನು ಪ್ರಸಿದ್ಧನಲ್ಲ. ಇದರಂತೆ ಆತ್ಮನನ್ನು ಅನಾತ್ಮದಲ್ಲಿ (ಆರೋಪಿಸುತ್ತಾರೆಂಬುದೂ ಸರಿಯಲ್ಲ.) |
| ೮೯ | ೯ | ಪಕ್ಷದಲ್ಲಿ | ಒಂದನೆಯ ಪಕ್ಷದಲ್ಲಿ |
| ,, | ೧೮ | ಕಲ್ಪಿತವಾಗಿದಾರೆಂದ | ಕಲ್ಪಿತವಾಗಿದಾರೆಂಬ |
| ೯೧ | ೯ | ಮುಂತಾದವುಗಳಿಗೆ | ಮುಂತಾದವುಗಳಲ್ಲಿ ಯಾವದೊಂದಕ್ಕೂ |
| ೯೨ | ೧೯ | ೫ರ ವಿವರಣೆಯಲ್ಲಿ | ೬ರ ವಿವರಣೆಯಲ್ಲಿ |
| ೧೦೩ | ೧೨ | ಶಿಷ್ಯ: | ೧೨. ಶಿಷ್ಯ:— |
| ೧೧೫ | ೧೩ | ಪದಾರ್ಥ | ಪರಾರ್ಥ |
| ೧೨೭ | ೭ | ಶಿಷ್ಯ:— | ೧೬. ಶಿಷ್ಯ:— |
| ೧೨೮ | ೬ | ಚೈತ್ಯವೂ | ಚೈತನ್ಯವೂ |
| ೧೩೨ | ೧೪ | ಎಂಬುದರ | ಎಂಬುದಕ್ಕಿಂತ ಬೇರೆಯಲ್ಲವೆಂದರೆ |
| ೧೫೨ | ೫ | ೫ನೆಯ | ೬ನೆಯ |
| ೧೫೪ | ೧೩ | ೧೯ | ೨೦ |

ಸೂಚನೆ:—ಇಲ್ಲಿಂದ ಮುಂದಕ್ಕೆ ಅಧ್ಯಾಯವು ಮುಗಿಯುವವರೆಗೂ ಇದಕ್ಕೆ ತಕ್ಕಂತೆ ಖಂಡಸಂಖ್ಯೆಗಳನ್ನು ಒಂದೊಂದು ಹೆಚ್ಚಾಗುವಂತೆ ತಿದ್ದಿಕೊಳ್ಳಬೇಕು.

| | | | |
|---|---|---|---|
| ೧೬೧ | ೨೦ | ಇರುವದೆಂಬುದು | ಇರುವದೇ ಮುಂತಾದದ್ದು |
| ೧೭೮ | ೨೨ | ೧೭—೧೯ | ೧೭—೨೦ |
| ೧೭೯ | ೩ | ೨೦—೨೨ | ೨೧—೨೩ |
| ೧೯೯ | ೧ | | ಪುಟಸಂಖ್ಯೆಯು ೧೯೪ ಎಂತ ಇರಬೇಕು |

## ಸೇರಿಸಿಕೊಳ್ಳಬೇಕಾದದ್ದು:

೧. ೫೧ನೆಯ ಪುಟ, ೧ನೆಯ ಸಾಲು '(ಗೀ. ೧೩-೨೭)' ಇದರ ಮುಂದೆ ಇದನ್ನು ಸೇರಿಸಿಕೊಳ್ಳಿ:—

"ವಿದ್ಯಾವಿನಯಗಳಿಂದ ಕೂಡಿದ (ಬ್ರಾಹ್ಮಣನಲ್ಲಿಯೂ ಗೋವಿನಲ್ಲಿಯೂ ಆನೆಯಲ್ಲಿಯೂ ಚಂಡಾಲನಲ್ಲಿಯೂ ಪಂಡಿತರು ಸಮದರ್ಶಿಗಳಾಗಿರುವರು)(ಗೀ. ೫-೧೮)"

೨. ೫೮ನೆಯ ಪುಟದ ಕೆಳಗೆ 'ಸಿಂದಿಸಿರುವದೂ*' ಎಂಬುದಕ್ಕೆ ಈ ಟಿಪ್ಪಣಿಯನ್ನು ಸೇರಿಸಿಕೊಳ್ಳಿ:—

'ಪ್ರತಿಷೇಧಾರ್ಥೋಪಪತ್ತಿಶ್ಚೋಪಪದ್ಯತೇ' ಎಂಬ ಮೂಲವನ್ನು 'ಪ್ರತಿಷೇಧಾರ್ಥೋಪಪತ್ತೇಶ್ಚ' ಎಂದು ತಿದ್ದಿಕೊಂಡಿದೆ.

೩. ೭೮ನೆಯ ಪುಟದ ಕೆಳಗೆ 'ಚಿಪ್ಪನ್ನು*' ಎಂಬುದಕ್ಕೆ ಇರಬೇಕಾದ ಟಿಪ್ಪಣಿ:—

'ಪ್ರಸಿದ್ಧಾಂ ವಾ ಶುಕ್ತಿಕಾಂ ರಜತೇ' ಎಂದು ಸಂದರ್ಭಕ್ಕನುಸಾರವಾಗಿ ಪಾಠವನ್ನು ಕಲ್ಪಿಸಿಕೊಂಡಿದೆ.

೪. ೧೦೯ನೆಯ ಪುಟ, ೪ರಿಂದ ೯ರವರೆಗಿನ ಸಾಲುಗಳಲ್ಲಿ 'ಎರಡು ದೊಡ್ಡ ಬೆಳಕುಗಳನ್ನಿಟ್ಟಿರುವ . . . . ಸ್ವಭಾವವು.'

ಈ ಭಾಗದ ಅರ್ಥವು ಸ್ಪಷ್ಟವಾಗುವದಕ್ಕೆ ಈ ಮುಂದಿನ ವಿವರಣೆಯನ್ನು ಪಯೋಗಿಸಿಕೊಳ್ಳಬೇಕು:—

ಎರಡು ದೊಡ್ಡ ದೀಪಗಳನ್ನಿಟ್ಟಿರುವ ಕಡೆಯಲ್ಲಿ ಒಂದಕ್ಕೆ ಸಹಾಯವಾಗಿ ಮತ್ತೊಂದರಿಂದೇನೂ ಬೆಳಕು ಬರಬೇಕಾದುದಿಲ್ಲ. ಎರಡು ದೀಪಗಳಲ್ಲಿಯೂ ಬೆಳಕು ಸ್ವಭಾವವಾಗಿರುವದು. ಇದರಂತೆ ನಿತ್ಯಚೈತನ್ಯಸ್ವರೂಪನಾದ ಆತ್ಮನಿಗೆ ಮತ್ತೊಂದು ಚೈತನ್ಯದಿಂದ ಅರಿವು ಬರುವದೆಂದು ಕಲ್ಪಿಸುವದಕ್ಕೆ ಎಂದಿಗೂ ಆಗುವ ಹಾಗಿಲ್ಲ. ದೀಪದ ದೃಷ್ಟಾಂತವನ್ನು ಇಷ್ಟರಮಟ್ಟಿಗೆ ಮಾತ್ರ ಉಪಯೋಗಿಸಿಕೊಳ್ಳಬೇಕು. ದೃಷ್ಟಾಂತಗಳಲ್ಲಿ ಎರಡು ದೀಪಗಳಿರುವಂತೆ ನಿಜವಾಗಿಯೂ ಇಬ್ಬರು ಆತ್ಮರು ಇದ್ದಾರೆಂದೇನೂ ಇಲ್ಲಿ ಅಭಿಪ್ರಾಯವಿಲ್ಲ. ಏಕೆಂದರೆ ಚೈತನ್ಯಕ್ಕೆ ವಿಷಯವಾಗಿರುವ ಪದಾರ್ಥಗಳಲ್ಲಿ ಒಂದು, ಎರಡು— ಎಂಬ ಸಂಖ್ಯೆಯೂ ಅಂಥದ್ದು, ಇಂಥದ್ದು- ಎಂಬ ಗುಣಗಳೂ ಇರಬಹುದೇ

ಹೊರತು ವಿಷಯಿಯಾಗಿರುವ ಚೈತನ್ಯದಲ್ಲಿ ಸಂಖ್ಯೆಯನ್ನಾಗಲಿ ಗುಣವನ್ನಾಗಲಿ ಊಹಿಸುವದಕ್ಕೂ ಬರುವದಿಲ್ಲ. ಯಾವದು ಚೈತನ್ಯಕ್ಕೆ ವಿಷಯವಾಗಿ ಮಾತ್ರ ಇರಬಲ್ಲದೋ ಅದು ತಾನೇ ಚೈತನ್ಯವಾಗಿರಲಾರದು, ಅದಕ್ಕೆ ಚೈತನ್ಯದಂಥ ಸ್ವತಂತ್ರವಾದ ಇರುವಿಕೆಯೂ ದಕ್ಕಲಾರದು. ಆದ್ದರಿಂದ 'ನನ್ನ ಆತ್ಮನು ಚೈತನ್ಯಸ್ವರೂಪನು, ಮಿಕ್ಕವರೆಲ್ಲರಿಗೂ ಒಬ್ಬೊಬ್ಬರಿಗೆ ಒಬ್ಬೊಬ್ಬ ಚೈತನ್ಯಸ್ವರೂಪನಾದ ಆತ್ಮನಿರುವನು, ಆತ್ಮರೆಲ್ಲರಿಗಿಂತ ಬೇರೆಯಾಗಿ ಪರಮಾತ್ಮನೊಬ್ಬನಿರುವನು' ಎಂದು ಚೈತನ್ಯದಲ್ಲಿ ಅನೇಕತ್ವವನ್ನಾಗಲಿ ಹಿರಿದು ಕಿರಿದೆಂಬ ತಾರತಮ್ಯವನ್ನಾಗಲಿ ಮಾಡುವದು ಮೌಢ್ಯವೇ ಸರಿ.

೩. ೧೯೫ನೆಯ ಪುಟ, ೧೯ನೆಯ ಸಾಲು 'ನೀರಿನಲ್ಲಿ ಅಥವಾ ಕನ್ನಡಿಯಲ್ಲಿ . . . . ಇರುವದಿಲ್ಲ.'

ಈ ಭಾಗದ ಅರ್ಥವನ್ನು ಈ ವಿವರಣೆಯು ಸ್ಪಷ್ಟಗೊಳಿಸುವದು:—

ನೀರಿನಲ್ಲಿ ಅಥವಾ ಕನ್ನಡಿಯಲ್ಲಿ ತೋರುವ ಮನುಷ್ಯನ ನೆರಳು ಹೇಗೆ ಅವನಿಗೆ ಎರಡನೆಯದೆನಿಸುವದೋ ಅದರಂತೆಯೇ ಆತ್ಮನಿಗೆ ಅನಾತ್ಮವಸ್ತುವೆಲ್ಲವೂ ಎರಡನೆಯದೆನಿಸುವದು. ಸರಿಯಾಗಿ ನೋಡಿದರೆ ಮನುಷ್ಯದೇಹಕ್ಕಿರುವ ಇರವು ಅವನ ನೆರಳಿಗೆ ಎಂದಿಗೂ ಇರುವದಿಲ್ಲ, ಏಕೆಂದರೆ ಅದು ಬರಿಯ ತೋರಿಕೆಯ ಇರವುಳ್ಳದ್ದಾಗಿದೆ. ಇದರಂತೆ ಕೂಟಸ್ಥನಿತ್ಯವಾದ ಆತ್ಮನಿಗಿರುವ ಪರಮಾರ್ಥಸತ್ಯರೂಪವಾದ ಸತ್ತೆಯು ಯಾವದೊಂದು ವಸ್ತುವಿಗೂ ಸಲ್ಲುವದಿಲ್ಲ ; ಏಕೆಂದರೆ ಅನಾತ್ಮವು ಎಚ್ಚರಕನಸುಗಳಲ್ಲಿ ಮಾತ್ರ ತೋರುತ್ತಿದ್ದು ಆಯಾ ಅವಸ್ಥೆಗೇ ಕಟ್ಟುಬಿದ್ದಿರುವ ಇರುವಿಕೆಯುಳ್ಳದ್ದಾಗಿದೆ. ಈ ದೃಷ್ಟಿಯಿಂದ ನೋಡಿದರೆ ಆತ್ಮನಿಗೆ ಸಮವಾಗಿ ಅವನಿಗೆ ಎರಡನೆಯದೆನಿಸಿಕೊಳ್ಳಬಲ್ಲ ಅನಾತ್ಮವಸ್ತುವು ಯಾವುದೂ ಇಲ್ಲವೇ ಇಲ್ಲ.



೨೩-೭-೩೨. ಅಧ್ಯಾತ್ಮಪ್ರಕಾಶಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು ಸಿಟಿ.

ಅಧ್ಯಾತ್ಮವಿದ್ಯೆಯ ಬೊಕ್ಕಸವಾದ

# ಉಪನಿಷತ್ತುಗಳು

೧. **ಈಶಾವಾಸ್ಯೋಪನಿಷತ್ತು** (ಕನ್ನಡದಲ್ಲಿ)–ಸಂಸ್ಕೃತಮೂಲ, ಅರ್ಥ, ಭಾಷ್ಯಾನುವಾದ, ಅಡಿಯಲ್ಲಿ ಟಿಪ್ಪಣಿ, ಕೊನೆಯಲ್ಲಿ ಸಾರಾಂಶ, ಕಷ್ಟಪದಗಳ ಸಾರ್ಥ ಅಕ್ಷರಾನುಕ್ರಮಣಿಕೆ, ಆಚಾರ್ಯರ ಭಾವಚಿತ್ರ- ಇವುಗಳನ್ನೆಲ್ಲ ಸೇರಿಸಿದೆ.

ಬೆಲೆ: ೦—೫—೦ 'ಅ.ಪ್ರ.'ದ ಚಂದಾದಾರರಿಗೆ: ೦—೪—೬

೨. **ಕಠೋಪನಿಷತ್ತು**— ಆತ್ಮನು ಸಂಸಾರಿಯಾಗಿಯೂ ಒಂದೊಂದು ಶರೀರದಲ್ಲಿಯೂ ಬೇರೆಬೇರೆಯಾಗಿಯೂ ಇರುವಂತೆ ಅವಿದ್ಯೆಯ ಕಣ್ಣಿಗೆ ಕಾಣುತ್ತಿದ್ದರೂ ನಿಜವಾಗಿ ಅವಿದ್ಯಾಕಾಮಕರ್ಮಗಳಿಗೆ ಕಟ್ಟುಬೀಳದೆ ಅಸಂಸಾರಿಯಾಗಿ ಇರುವನೆಂಬುದನ್ನೂ ಸರಿಯಾದ ಸಾಧನದಿಂದ ಕೂಡಿರುವವನೂ ಅನುಭವಿಯಾದ ಗುರುವಿನ ಉಪದೇಶದಿಂದ ಈ ತತ್ತ್ವವನ್ನು ಮನಗಂಡರೆ ಕೂಡಲೆ ಸಕಲ ಸಂಸಾರಬಂಧನಗಳೂ ಕಳಚಿಕೊಳ್ಳುವವೆಂಬುದನ್ನೂ ಬಹು ಸರಸವಾಗಿ ವಿವರಿಸಿರುತ್ತದೆ

ಬೆಲೆ: ೧—೦—೦ 'ಅ.ಪ್ರ.'ದ ಚಂದಾದಾರರಿಗೆ:೦—೧೫—೦

೩. **ಮುಂಡಕೋಪನಿಷತ್ತು**— ಇದರಲ್ಲಿ ಪರ, ಅಪರ– ಎಂಬ ವಿದ್ಯೆಗಳ ವಿವೇಚನೆಯನ್ನು ಮಾಡಿದೆ; ಆತ್ಮವಿದ್ಯೆಗೆ ಸಾಧನಗಳನ್ನೂ ತಿಳಿಸಿದೆ; ಉಳಿದ ಉಪನಿಷತ್ತುಗಳಿಗಿರುವಂತೆಯೇ ವಿವರಗಳೆಲ್ಲ ಇವೆ.

ಬೆಲೆ: ೦–೧೨–೦ 'ಅ.ಪ್ರ.'ದ ಚಂದಾದಾರರಿಗೆ: ೦–೧೧–೦

೪. **ಮಾಂಡೂಕ್ಯೋಪನಿಷತ್ತು**–ಇದರಲ್ಲಿ ಎಚ್ಚರ, ಕನಸು, ನಿದ್ದೆ– ಎಂಬ ಮೂರು ಅವಸ್ಥೆಗಳ ಸೋಂಕೂ ಇಲ್ಲದೆ ನಿರ್ಮಲವಾಗಿರುವ ನಮ್ಮೆಲ್ಲರ ಆತ್ಮಸ್ವರೂಪವನ್ನು ಅನುಭವಕ್ಕೆ ತಂದುಕೊಡುತ್ತದೆ.

ಬೆಲೆ: ೦–೯–೦ 'ಅ.ಪ್ರ.'ದ ಚಂದಾದಾರರಿಗೆ: ೦–೮–೬

---

'ಅಧ್ಯಾತ್ಮಪ್ರಕಾಶ'ವು ಭಕ್ತಿಜ್ಞಾನವೈರಾಗ್ಯಾದಿಗಳ ವಿಷಯವಾದ ಬರಹಗಳಿಂದ ಕೂಡಿ ತಿಂಗಳಿಗೊಂದು ಸಲ ಹೊರಡುವ ಪತ್ರಿಕೆ.

ಚಂದ: ೨–೦–೦ ಬಿಡಿಸಂಚಿಕೆ ೦–೪–೦

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರು ಸಿಟಿ.**